


# ಕರ್ನಾಟಕ ಶಾಸನ ಸಂಪತ್ತು

ಡಾ|| ಎ. ವಿ. ನರಸಿಂಹಮೂರ್ತಿ



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು–೫೬೦ ೦೦೨

ಡಾ. ಎ. ವಿ. ನರಸಿಂಹಮೂರ್ತಿ ಅವರಿಂದ ರಚಿಸಲ್ಪಟ್ಟ 'ಕರ್ನಾಟಕ ಶಾಸನ ಸಂಪತ್ತು' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

KARNATAKA SHASANA SAMPATHU—a monograph on Karnataka Inscriptions written by Dr. A. V. Narasimha Murthy. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009



ಬೆಲೆ ರೂ. ೨-೦೦

ಮುಖ ಚಿತ್ರ : ಮೋಹನ್
ರೇಖಾ ಚಿತ್ರಗಳು : ರಘುನಾಥ ಭಟ್

ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರ್ಸ್,
ಬೆಂಗಳೂರು-೫೬೦ ೦೦೯

ಕರ್ನಾಟಕದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೆಚ್ಚಿಸುವಲ್ಲಿ ಕನ್ನಡನಾಡಿನ ಶಾಸನಗಳು ವಿಶೇಷ ಪಾತ್ರವನ್ನು ವಹಿಸಿವೆ. ತಮಿಳುನಾಡನ್ನು ಬಿಟ್ಟರೆ, ಕರ್ನಾಟದಲ್ಲಿ ದೊರಕಿರುವಷ್ಟು ಶಾಸನಗಳು ಭಾರತದ ಇನ್ಯಾವ ರಾಜ್ಯದಲ್ಲೂ ದೊರಕಿಲ್ಲ ಎಂಬುದು ಹೆಮ್ಮೆಯ ಮತ್ತು ಅಭಿಮಾನದ ಸಂಗತಿ. ಸಂಖ್ಯೆಯಲ್ಲಿ ಮಾತ್ರವಲ್ಲದೆ, ಅವುಗಳ ವೈಶಿಷ್ಟ್ಯ, ವೈವಿಧ್ಯತೆ, ಹಲವಾರು ಪ್ರಕಾರಗಳು, ಅವುಗಳ ವ್ಯವಸ್ಥಿತ ಅಧ್ಯಯನ ಮುಂತಾದವುಗಳಿಂದ ಕನ್ನಡನಾಡಿನ ಶಾಸನಗಳು ಜಗತ್ತಿನಲ್ಲೇ ಪ್ರಸಿದ್ಧವಾಗಿವೆ. ಶಾಸನ ಪ್ರಕಾಶನ ಪ್ರಪಂಚದಲ್ಲಿ ಈಗ ಬಳಕೆಯಲ್ಲಿರುವ 'ಎಪಿಗ್ರಾಫಿಯ' ಎನ್ನುವ ಪದವನ್ನು ಮೊಟ್ಟಮೊದಲು ಉಪಯೋಗಿಸಿ, ಅದು ಎಲ್ಲರಿಗೂ ಗ್ರಾಹ್ಯವಾಗುವಂತೆ ಮಾಡಿದ ಕೀರ್ತಿಯೂ ಕರ್ನಾಟಕಕ್ಕೆ ಸೇರುತ್ತದೆ. ಈ ರೀತಿ ವಿಶ್ವಮಾನ್ಯವಾದ ಕರ್ನಾಟಕದ ಶಾಸನ ಸಂಪತ್ತು ನಮ್ಮೆಲ್ಲರ ಅಮೂಲ್ಯ ಆಸ್ತಿ. ಅದರ ವಿಷಯವನ್ನು ತಿಳಿದುಕೊಳ್ಳುವುದು ಮತ್ತು ಆ ಶಾಸನ ಸಂಪತ್ತನ್ನು ಕಾಪಾಡಿಕೊಂಡು ಬರುವುದು ನಮ್ಮೆಲ್ಲರ ಪವಿತ್ರ ಕರ್ತವ್ಯ. ಈ ಮುಂದಿನ ಪುಟಗಳಲ್ಲಿ ಶಾಸನ ಸರಸ್ವತಿಯ ಪರಿಚಯವನ್ನು ಮಾಡಿಕೊಳ್ಳೋಣ.

ಶಾಸನ ಎಂಬ ಪದವು ಸಂಸ್ಕೃತದ ಶಾಸ್ ಎಂಬ ಧಾತುವಿನಿಂದ ಬಂದಿದೆ. ಆಜ್ಞೆ ಮಾಡು, ಘೋಷಣೆ ಮಾಡು ಎನ್ನುವ ಅರ್ಥವು ಇದರಿಂದ ಬರುತ್ತದೆ. ಸಾಮಾನ್ಯವಾಗಿ ರಾಜನ ಇಲ್ಲವೇ ಅವನ ಅಧಿಕಾರಿಗಳಾದ ಮಂತ್ರಿಗಳು ಮೊದಲಾದವರ ಆಜ್ಞೆಯಂತೆ ಈ ಶಾಸನಗಳು ಬರೆಸಲ್ಪಟ್ಟವು;



ಬೆಳ್ಳಿಯ ಆನೆಯ ಮೇಲಿರುವ ಬರಹ

ಎಲ್ಲ ಶಾಸನಗಳೂ ಆಜ್ಞೆಯನ್ನೇ ಹೊಂದಿರುವುದಿಲ್ಲ. ಆದರೆ ಈ ರೀತಿಯ ಬರಹಗಳು ರಾಜರ, ಮಂತ್ರಿಗಳ ಮತ್ತು ಇತರ ಅಧಿಕಾರಿಗಳ ಅಧಿಕಾರದ ಮುದ್ರೆಯಿಂದ ರಚಿತವಾಗುತ್ತಿದ್ದವು. ಅಂದರೆ ಈ ಬರಹಗಳು ಪ್ರಮಾಣಯುಕ್ತ ಅಥವಾ ಅಧಿಕಾರಯುಕ್ತವಾಗಿದ್ದುದರಿಂದ ಈ ರೀತಿಯ ಬರಹಗಳೆಲ್ಲವನ್ನೂ ಶಾಸನ ಎಂದು ಕರೆಯುತ್ತೇವೆ. ಸಾಮಾನ್ಯ ರೀತಿಯಲ್ಲಿ ಹೇಳುವುದಾದರೆ ಕಲ್ಲು, ತಾಮ್ರ, ಬೆಳ್ಳಿ, ಚಿನ್ನ, ಕಂಚು, ಹಿತ್ತಾಳೆ, ಕಬ್ಬಿಣ ಮುಂತಾದ ಲೋಹಗಳ ತಗಡುಗಳು, ನಾಣ್ಯಗಳು ಅಥವಾ



ಬರಹವಿರುವ ನಾಣ್ಯಗಳು

ವಿಗ್ರಹಗಳು, ಶಂಖ, ದಂತ, ಮಣ್ಣಿನ ಮಡಕೆ, ಮರ, ಪ್ರಾಣಿಗಳ ಚರ್ಮ ಮುಂತಾದ ವಸ್ತುಗಳ ಮೇಲೆ ಕಾಣಬರುವ ಬರವಣಿಗೆಗಳನ್ನು ಮಾತ್ರ ಶಾಸನವೆಂದು ಹೇಳುತ್ತೇವೆ. ಕಾಗದ, ಓಲೆಗರಿ, ತಾಳೆಗರಿ ಮುಂತಾದ ವಸ್ತುಗಳ ಮೇಲಿನ ಬರವಣಿಗೆಯನ್ನು ಶಾಸನದಲ್ಲಿ ಸಾಮಾನ್ಯವಾಗಿ ಸೇರಿಸುವುದಿಲ್ಲ.

## ಉಗಮ

ಕಲ್ಲಿನ ಮೇಲೆ ಕೆತ್ತಿದ ಅಥವಾ ಕೊರೆದ ಪ್ರಾಚೀನ ಬರವಣಿಗೆಯನ್ನು ಶಿಲಾಶಾಸನವೆನ್ನುತ್ತೇವೆ. ಕಲ್ಲಿನ ಮೇಲೆ ಬರಹಗಳನ್ನು ಕೆತ್ತುವುದು ಬಹು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿರುವ ಪದ್ಧತಿ. ಕರ್ನಾಟಕದಲ್ಲಿ ಅಶೋಕನು

ಕಲ್ಲಿನ ಮೇಲೆ ಕೆತ್ತಿಸಿದ ಶಾಸನಗಳೇ ಅತ್ಯಂತ ಹಳೆಯವು ಅಥವಾ ಪ್ರಾಚೀನವಾದವು. ಕಲ್ಲು ಶಾಶ್ವತವಾದ ವಸ್ತು. ಸುಲಭವಾಗಿ ಅದು ಹಾಳಾಗುವುದಿಲ್ಲ. ಆದುದರಿಂದ ಕಲ್ಲಿನ ಮೇಲೆ ಶಾಸನ ವನ್ನು ಕೆತ್ತಿಸಿದರೆ ಅದು ಬೇಗ ಹಾಳಾಗದೆ ಶಾಶ್ವತವಾಗಿ ಉಳಿಯು ತ್ತದೆ ಎಂಬ ಭಾವನೆಯಿಂದ ಕಲ್ಲಿನ ಮೇಲೆ ಶಾಸನಗಳನ್ನು ಕೆತ್ತಿ ಸುವ ಪದ್ಧತಿಯು ಪ್ರಾರಂಭವಾಯಿತು. ತನ್ನ ಶಾಸನಗಳು ಶಾಶ್ವತವಾಗಿ ಉಳಿಯಲೆಂಬ ಆಸೆಯಿಂದ ತಾನು ಶಾಸನಗಳನ್ನು ಕಲ್ಲಿನ ಮೇಲೆ ಕೊರೆಯಿಸಿದುದಾಗಿ ಅಶೋಕನೇ ಒಂದು ಧರ್ಮ ಲಿಪಿಯಲ್ಲಿ ಹೇಳಿಕೊಂಡಿದ್ದಾನೆ.

ಶಾಸನಗಳು ಜನ್ಮ ತಾಳಲು ಕಾರಣಗಳೇನು ಎಂಬ ಪ್ರಶ್ನೆಗೆ ಖಚಿತವಾದ ಉತ್ತರ ಹೇಳುವುದು ಕಷ್ಟ. ಆದರೆ ಧರ್ಮವೇ ಭಾರತೀಯ ಶಾಸನಗಳ ಪ್ರೇರಕಶಕ್ತಿ ಎಂದರೆ ತಪ್ಪಾಗಲಾರದು. ನಾವು ಆಗಲೇ ಹೇಳಿದಂತೆ ಅಶೋಕನ ಶಾಸನಗಳನ್ನು ಧರ್ಮಲಿಪಿ ಎಂದು ಕರೆಯುತ್ತೇವೆ. ಅಶೋಕನು ತಾನು ಮಾಡಿದ ಧರ್ಮ ಬೋಧೆಯು ಎಲ್ಲ ಜನರ ಗಮನಕ್ಕೂ ಬರಬೇಕು; ಪ್ರತಿಯೊಬ್ಬ ಪ್ರಜೆಯೂ ಅದನ್ನು ಓದಿ ತಿಳಿದುಕೊಂಡು ಧರ್ಮದ ಮಾರ್ಗ ವನ್ನು ಅನುಸರಿಸಬೇಕು ಮುಂತಾದ ಆಶಯದಿಂದ ಬಂಡೆಗಳ ಮೇಲೆ, ಕಲ್ಲು ಕಂಬಗಳ ಮೇಲೆ ತನ್ನ ಶಾಸನಗಳನ್ನು ಕೆತ್ತಿಸಿದನು. ಇದೇ ಮಾರ್ಗವನ್ನನುಸರಿಸಿ ಇತರ ರಾಜರು, ಮಂತ್ರಿಗಳು, ಅಧಿ ಕಾರಿಗಳು, ದಾನಿಗಳು ಮುಂತಾದವರು ತಾವು ದೇವಾಲಯಗಳಿಗೆ ಅಥವಾ ಅನ್ನಸತ್ರಗಳಿಗೆ, ವಿದ್ಯಾಕೇಂದ್ರಗಳಿಗೆ, ಮಠಗಳಿಗೆ ಮುಂತಾದವುಗಳಿಗೆ ಕೊಟ್ಟ ದಾನ ಧರ್ಮಗಳ ವಿವರಗಳನ್ನು ಕಲ್ಲಿನ ಕಂಬಗಳ ಮೇಲೆ ಕೆತ್ತಿಸಿ, ಜನರೆಲ್ಲರಿಗೂ ತಿಳಿಯುವಂತೆ ಮತ್ತು ತಾವು ಕೊಟ್ಟ ದಾನ-ಧರ್ಮಗಳು ಶಾಶ್ವತವಾಗಿ ಉಳಿಯು

ವಂತೆ ಮಾಡಿದರು. ಅಂದರೆ ಪ್ರತಿಯೊಂದು ಶಾಸನವೂ ಒಂದಲ್ಲ ಒಂದು ರೀತಿಯಿಂದ ಧರ್ಮದ ಸಂಕೇತವೆಂದಾಯಿತು. ಸಾವಿರಾರು ಶಾಸನಗಳು ಕರ್ನಾಟಕದಲ್ಲಿ ದೊರಕಿರುವುದರಿಂದ ಮತ್ತು ಇನ್ನೂ ದೊರಕುತ್ತಿರುವುದರಿಂದ ಕರ್ನಾಟಕದ ರಾಜರು ಮತ್ತು ಪ್ರಜೆಗಳು ವಿಷ್ಟೊಂದು ಧಾರ್ಮಿಕ ಪ್ರವೃತ್ತಿಯುಳ್ಳವರಾಗಿದ್ದರೆಂಬುದು ನಮಗೆ ಗೊತ್ತಾಗುತ್ತದೆ.

## ಅಧ್ಯಯನದ ಇತಿಹಾಸ

ಅಶೋಕನ ಕಾಲದಿಂದಲೂ (ಸಿಂಧೂ ನಾಗರಿಕತೆಯ ಇನ್ನೂ ಓದಲಾಗದಿರುವ ಲಿಪಿಯನ್ನು ಬಿಟ್ಟರೆ) ನಮ್ಮಲ್ಲಿ ಶಾಸನಗಳನ್ನು ಬರೆಯಿಸುವ ಪದ್ಧತಿಯು ಒಂದೇ ಸಮನೆ ಬೆಳೆಯುತ್ತ ಬಂದಿದೆಯೆಂಬುದಕ್ಕೆ ವಿವಿಧ ಕಾಲಗಳ ಸಾವಿರಾರು ಶಾಸನಗಳೇ ಸಾಕ್ಷಿ. ಆದರೆ ಕಾಲ ಕಳೆದಂತೆ ಭಾರತೀಯರು ತಾವು ಬರೆದ ಶಾಸನಗಳನ್ನು ತಾವೇ ಓದಲಾರದೆ ಹೋದರು. ಇದಕ್ಕೆ ಶಾಸನಗಳನ್ನು ಬರೆಯುವ ಲಿಪಿಯ ಬದಲಾವಣೆಯೇ ಕಾರಣ. ಹೀಗಾಗಿ ಅಶೋಕನ ಶಾಸನಗಳನ್ನು ಓದುವುದು ಸಾಧ್ಯವಾಗದ ಕೆಲಸವಾಗಿದ್ದಿತು. ಕ್ರಿ.ಶ. ಹದಿನಾಲ್ಕನೆಯ ಶತಮಾನದಲ್ಲಿ ಫಿರೋಜ್ ಷಾ ತೊಗಲಕ್ಕನು ಅಶೋಕನ ಶಾಸನಗಳನ್ನು ಓದಿಸಲು ಬಹು ಪ್ರಯತ್ನಪಟ್ಟನು. ಆದರೆ ಆ ಶಾಸನಗಳ ಲಿಪಿಯನ್ನು ಓದುವ ವಿದ್ವಾಂಸರು ಯಾರೂ ದೊರಕಲಿಲ್ಲ. ಇದೇ ರೀತಿ ಅಕ್ಬರನೂ ಪ್ರಯತ್ನಿಸಿ ವಿಫಲನಾದನು. ಹೀಗಾಗಿ ಇವು ಪೈಶಾಚೀ ಭಾಷೆಯಲ್ಲಿವೆ, ರಾಕ್ಷಸರ ಭಾಷೆಯಲ್ಲಿವೆ ; ಇಲ್ಲವೇ ಇವುಗಳನ್ನು ದೇವರೇ ಬರೆದಿಟ್ಟಿದ್ದಾನೆ, ಇವುಗಳನ್ನು ಓದಿದವರು ಮರಣ

ಹೊಂದುತ್ತಾರೆ ಇಲ್ಲವೇ ಹೇರಳ ಧನಲಾಭ ಪಡೆಯುತ್ತಾರೆ; ಪಾಪಿಗಳು ಈ ಶಾಸನಗಳನ್ನು ಓದಲಾರರು–ಮುಂತಾದ ಮೂಢ ನಂಬಿಕೆಗಳು ಬೆಳೆದು ಬಂದವು. ಅನೇಕ ಹಳ್ಳಿಗಳಲ್ಲಿ ಇಂದಿಗೂ ಶಾಸನಗಳನ್ನು ಪೂಜಿಸುವುದನ್ನೂ ಕಾಣಬಹುದು.

## ಜೇಮ್ಸ್ ಪ್ರಿನ್ಸೆಪ್

ಹೀಗಾಗಿ ನಮ್ಮ ಶಾಸನಗಳನ್ನು ಯಾರೂ ಓದಲಾಗದೇ ಇದ್ದ ಕಾಲದಲ್ಲಿ, ಜೇಮ್ ಪ್ರಿನ್ಸೆಪ್ ಎಂಬ ವಿದ್ವಾಂಸನು ೧೮೩೪ರಲ್ಲಿ ಭಾರತೀಯ ಶಾಸನಗಳನ್ನು ಓದುವ ಕಾರ್ಯವನ್ನು ಕೈಗೊಂಡನು. ಈತನು ಗ್ರೀಕ್ ಮತ್ತು ಬ್ರಾಹ್ಮೀ ಲಿಪಿಯ ಬರವಣಿಗೆಗಳಿದ್ದ ಕೆಲವು ನಾಣ್ಯಗಳನ್ನು ತೆಗೆದುಕೊಂಡು, ಅವುಗಳಲ್ಲಿದ್ದ ಅಕ್ಷರಗಳ ಸಹಾಯದಿಂದ ಬ್ರಾಹ್ಮೀ ಲಿಪಿಯ ಕೆಲವು ಅಕ್ಷರಗಳನ್ನು ಗುರುತಿಸಿದನು. ಇದೇ ಪ್ರಾಚೀನ ಶಾಸನಗಳ ಓದುವಿಕೆಗೆ ನಾಂದಿಯಾಯಿತು. ಭಾರತೀಯರೇ ಮರೆತುಬಿಟ್ಟಿದ್ದ ಶಾಸನಗಳ ಗುಟ್ಟನ್ನು ಆಂಗ್ಲ ವಿದ್ವಾಂಸನೊಬ್ಬನು ಬಿಡಿಸಿ ಶಾಸನ ಶಾಸ್ತ್ರಕ್ಕೆ ವಿಶೇಷ ಸಹಾಯ ಮಾಡಿದನು. ಆದುದರಿಂದ ಭಾರತೀಯರು ಜೇಮ್ಸ್ ಪ್ರಿನ್ಸೆಪ್‌ನಿಗೆ ಋಣಿಯಾಗಿರಬೇಕು.

## ಲೂಯಿ ರೈಸ್

ಈತನ ಈ ಕೊಡುಗೆಯಿಂದ ಇದುವರೆವಿಗೂ ಓದಲಾಗದೇ ಇದ್ದ ಸಾವಿರಾರು ಶಾಸನಗಳನ್ನು ವಿದ್ವಾಂಸರು ಓದಿ ಪ್ರಕಟಿಸಲಾರಂಭಿಸಿದರು, ಕರ್ನಾಟಕದಲ್ಲಿ ಶಾಸನಗಳ ಬಗೆಗೆ

ತಿಳಿಯುವಾಗ ಲೂಯಿ ರೈಸ್, ಎಂ. ಎಚ್. ಕೃಷ್ಣ, ಆರ್. ನರಸಿಂಹಾಚಾರ್, ಕೀಲ್‌ಹಾರ್ನ್, ಫ್ಲೀಟ್, ಲಕ್ಷ್ಮೀನಾರಾಯಣ ರಾವ್, ಕೃಷ್ಣಶಾಸ್ತ್ರಿ, ಸರ್ಕಾರ್, ದೇಸಾಯಿ, ಪಂಚಮುಖಿ, ಜಿ. ಎಸ್. ಗಾಯಿ ಮುಂತಾದ ಶ್ರೇಷ್ಠ ವಿದ್ವಾಂಸರ ಹೆಸರನ್ನು ಹೇಳಲೇಬೇಕು. ಕರ್ನಾಟಕದ ಶಾಸನ ಸಂಪತ್ತು ಶ್ರೀಮಂತವಾದುದು ಎಂದು ತೋರಿಸಲು ಈ ವಿದ್ವಾಂಸರೇ ಕಾರಣ. ಅದರಲ್ಲಿಯೂ ಮೈಸೂರು ಸಂಸ್ಥಾನದ ಪುರಾತತ್ತ್ವ ಇಲಾಖೆಯ ಡೈರೆಕ್ಟರ್ ಆಗಿದ್ದ ಲೂಯಿ ರೈಸರು ಕರ್ನಾಟಕದ ಶಾಸನ ಸಂಪತ್ತಿಗೆ ಮಾಡಿರುವ ಉಪಕಾರವು ಚಿರಸ್ಮರಣೀಯ. ಇವರು ಮೈಸೂರಿನ ಹಳ್ಳಿಗಳನ್ನು ತಿರುಗಿ ಮೂಲೆ ಮೂಲೆಯಲ್ಲಿದ್ದ ಕಲ್ಲಿನ ಮೇಲಿನ, ತಾಮ್ರ ಪತ್ರಗಳ ಮೇಲಿನ ಶಾಸನಗಳನ್ನು ಪತ್ತೆ ಮಾಡಿ, ಅಧ್ಯಯನ ಮಾಡಿ, ಆಂಗ್ಲ ಭಾಷೆಯ ಅನುವಾದದೊಂದಿಗೆ ಹನ್ನೆರಡು ಸಂಪುಟಗಳಲ್ಲಿ 'ಎಪಿಗ್ರಾಫಿಯ ಕರ್ನಾಟಿಕ' ಎಂಬ ಗ್ರಂಥಗಳನ್ನು ಪ್ರಕಟಿಸಿದರು. ಮಾದರಿಯ ಮೈಸೂರು ಶಾಸನ ಸಂಗ್ರಹಣೆ, ಮತ್ತು ಪ್ರಕಟಣೆಯಲ್ಲಿಯೂ ಇಡೀ ಭಾರತಕ್ಕೆ ಮತ್ತು ಇತರ ಅನೇಕ ದೇಶಗಳಿಗೆ ಈ ವಿಷಯದಲ್ಲಿ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿತು. 'ಎಪಿಗ್ರಾಫಿಯ ಕರ್ನಾಟಿಕ'ದ ಮೊದಲನೆಯ ಸಂಪುಟ ೧೮೮೬ರಲ್ಲಿ ಪ್ರಕಟವಾಯಿತು. ಇದಾದ ಆರು ವರ್ಷಗಳ ಅನಂತರ ಅಂದರೆ ೧೮೯೨ರಲ್ಲಿ ಭಾರತ ಸರ್ಕಾರವು 'ಎಪಿಗ್ರಾಫಿಯ ಇಂಡಿಕ' ಎಂಬ ಗ್ರಂಥವನ್ನು ಪ್ರಕಟಿಸಿತು. ಎಪಿಗ್ರಾಫಿಯ ಕರ್ನಾಟಿಕ ಗ್ರಂಥದ ಶತಮಾನೋತ್ಸವವನ್ನು ಸಮೀಕ್ಷಿಸುತ್ತಿದ್ದರೆ, ಭಾರತದ ಇತರ ಪ್ರಾಂತ್ಯಗಳಲ್ಲಿ ಈ ರೀತಿಯ ಪ್ರಕಟನೆಯ ಕಾರ್ಯ ಇನ್ನೂ ಪ್ರಾರಂಭವಾಗಿಯೇ ಇಲ್ಲ. ಮತ್ತೆ ಕೆಲವೆಡೆಗಳಲ್ಲಿ ನಾಲ್ಕೈದು

ವರ್ಷಗಳಿಂದ ಈಚೆಗೆ ಈ ರೀತಿಯ ಪ್ರಕಟನೆಗಳು ಹೆಚ್ಚಾಗುತ್ತಿವೆ.

ಲೂಯಿ ರೈಸನು ೧೮೮೬ ರಿಂದ ೧೯೦೬ ರವರೆಗೆ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಸುಮಾರು ಒಂಬತ್ತು ಸಾವಿರ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದರು. ಈಗ ಮೈಸೂರಿನಲ್ಲಿರುವ ಭಾರತ ಸರ್ಕಾರದ ಕೇಂದ್ರ ಶಾಸನ ಸಂಸ್ಥೆಯು ಕರ್ನಾಟಕದ ಇತರ ಭಾಗಗಳ ಶಾಸನಗಳನ್ನು ಪ್ರಕಟಿಸುತ್ತಿದೆ. ಕರ್ನಾಟಕದಲ್ಲಿ ಸುಮಾರು ನಲವತ್ತು ಸಾವಿರ ಶಾಸನಗಳಿವೆಯೆಂದು ಅಂದಾಜು ಮಾಡಲಾಗಿದೆ. ಇವುಗಳಲ್ಲಿ ಇದುವರೆವಿಗೂ ನಮ್ಮ ಗಮನಕ್ಕೆ ಬಂದಿರುವುದು ಸುಮಾರು ಇಪ್ಪತ್ತೈದು ಸಾವಿರ. ಇನ್ನೂ ಹದಿನೈದು ಸಾವಿರ ಶಾಸನಗಳನ್ನು ಪತ್ತೆ ಹಚ್ಚಿ ಅವುಗಳ ಅಧ್ಯಯನವನ್ನು ನಡೆಸಬೇಕಾಗಿದೆ. ಇಷ್ಟೊಂದು ಶ್ರೀಮಂತವಾದ ಕರ್ನಾಟಕದ ಶಾಸನಗಳ ಬಗೆಗೆ ಇನ್ನೂ ಹೆಚ್ಚಿಗೆ ತಿಳಿಯೋಣ.

## ಶಿಲಾಶಾಸನ

ಭಾರತದಲ್ಲಿರುವಂತೆಯೇ ಕರ್ನಾಟಕದಲ್ಲಿಯೂ ಶಿಲಾಶಾಸನಗಳೇ ವಿಶೇಷವಾಗಿವೆ. ನಾವು ಆಗಲೇ ಗಮನಿಸಿರುವಂತೆ ಶಾಸನಗಳು ಶಾಶ್ವತವಾಗಿರಬೇಕೆಂಬ ಆಕಾಂಕ್ಷೆಯಿಂದ ರಾಜರು ಶಾಸನಗಳನ್ನು ಕಲ್ಲಿನ ಮೇಲೆ ಕೆತ್ತಿಸಲು ಪ್ರಾರಂಭಿಸಿದರು. ಮೊದ ಮೊದಲು ಶಾಸನಗಳನ್ನು ಕೆತ್ತಲು ಬಂಡೆಗಳನ್ನೇ ಉಪಯೋಗಿಸುತ್ತಿದ್ದರು. ಬ್ರಹ್ಮಗಿರಿ, ಮಸ್ಕಿ ಮುಂತಾದ ಅಶೋಕನ ಶಾಸನಗಳು ಒರಟಾದ ಬಂಡೆಗಳ ಮೇಲೆ ಕೆತ್ತಲ್ಪಟ್ಟಿವೆ. ಕಾಲಕ್ರಮದಲ್ಲಿ ಶಾಸನಗಳನ್ನು ಕಲಾತ್ಮಕವಾಗಿ ಮಾಡುವ ದೃಷ್ಟಿಯಿಂದ ಕಲ್ಲನ್ನು ಬೇಕಾದ



ಶಿಲಾಶಾಸನ, ಪೆಗ್ಗೂರು
(ಚಿತ್ರ : ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಕೃಪೆಯಿಂದ)

ಆಕಾರಕ್ಕೆ ಕತ್ತರಿಸಿ ಅದರ ಮೇಲ್ಭಾಗವನ್ನು ನುಣ್ಣಗೆ ಮಾಡಿ ಅದಕ್ಕೆ ಹೊಳಪನ್ನು ಕೊಟ್ಟು ಅವುಗಳ ಮೇಲೆ ಶಾಸನಗಳನ್ನು ಬರೆಯಿಸುತ್ತಿದ್ದರು. ಅದರಲ್ಲಿಯೂ ಕದಂಬ, ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಕೆಲವು ಶಾಸನಗಳಂತೂ ಬಹುಸುಂದರವಾಗಿದ್ದು, ಶಾಸನಗಳನ್ನು ಬರೆಯಿಸುವುದು ಕರ್ನಾಟಕದಲ್ಲಿ ಒಂದು ಕುಶಲ ಕಲೆಯೇ ಆಗಿದ್ದಿತೆಂಬುದನ್ನು ತೋರಿಸುತ್ತದೆ.

ಸಾಮಾನ್ಯವಾಗಿ ಶಾಸನವನ್ನು ಆಸ್ಥಾನದ ಕವಿಯೋ ಅಥವಾ ಶಾಸನಾಧಿಕಾರಿಯೋ ಬರೆದು, ಅದನ್ನು ಸುಣ್ಣ ಅಥವ ಬಣ್ಣದಿಂದ ಕಲ್ಲಿನ ಮೇಲೆ ಬರೆಯುತ್ತಿದ್ದನು. ಅದರಂತೆ ಕಲ್ಲಿನ ಕೆಲಸಗಾರನು ಅಕ್ಷರಗಳನ್ನು ಕಲ್ಲಿನ ಮೇಲೆ ಕೊರೆಯುತ್ತಿದ್ದನು ಅಥವ ಕೆತ್ತುತ್ತಿದ್ದನು. ಕೆತ್ತುವಾಗ ಆಕಸ್ಮಾತ್ ತಪ್ಪುಗಳಾದರೆ ಅದನ್ನು ತಿದ್ದಿ ಬರೆಯಲು ಸಾಧ್ಯವಾಗುತ್ತಿರಲಿಲ್ಲ. ಅದನ್ನು ಅಲ್ಲಲ್ಲಿ ಹಂಸಪಾದಗಳನ್ನು ಹಾಕಿ ಸೂಚಿಸುತ್ತಿದ್ದರು. ಕೆತ್ತುವವರು ಅಷ್ಟೇನೂ ವಿದ್ಯಾವಂತರಲ್ಲದೇ ಇದ್ದುದರಿಂದ ಅಕ್ಷರಗಳನ್ನು ಕೆತ್ತುವಲ್ಲಿ ಅನೇಕ ತಪ್ಪುಗಳಾಗಿರುವುದು ಮತ್ತು ಅವುಗಳು ಹಾಗೆಯೇ ಉಳಿದಿರುವುದೂ ನಮಗೆ ಕಾಣಬರುತ್ತವೆ.

## ಸ್ತಂಭಶಾಸನಗಳು

ದೇವಾಲಯಗಳು, ಬೌದ್ಧ ಚೈತ್ಯಾಲಯಗಳು ಮುಂತಾದ ಕಡೆಗಳಲ್ಲಿ ಸ್ತಂಭಗಳು ವಿಶೇಷವಾಗಿರುತ್ತವೆ. ಆದುದರಿಂದ ಕಂಬಗಳ ಮೇಲೆ ಶಾಸನಗಳನ್ನು ಕೆತ್ತುವ ಪದ್ಧತಿಯು ಜನಾನುರಾಗಿಯಾಯಿತು. ಅಶೋಕನಾದರೋ ಶಾಸನಗಳಿಗಾಗಿಯೇ ಸ್ತಂಭಗಳನ್ನು ಮಾಡಿಸಿ ತನ್ನ ರಾಜ್ಯದ

ವಿವಿಧ ಸ್ಥಳಗಳಲ್ಲಿ ನೆಡಿಸಿದನು. ಶತ್ರುಗಳ ಮೇಲೆ ವಿಜಯವನ್ನು ಸಂಪಾದಿಸಿದ ರಾಜರು ಮತ್ತು ದಂಡನಾಯಕರು, ತಮ್ಮ ವಿಜಯದ ಜ್ಞಾಪಕಾರ್ಥವಾಗಿ ವಿಜಯಸ್ತಂಭಗಳನ್ನು ಮಾಡಿಸಿ ಅದರಲ್ಲಿ ತಮ್ಮ ವಿಜಯವನ್ನು ಶಾಸನ ರೂಪದಲ್ಲಿ ಕೆತ್ತಿಸಿ ನೆಡಿಸುತ್ತಿದ್ದರು. ಕರ್ನಾಟಕದಲ್ಲಿ ಈ ರೀತಿಯ ಸ್ತಂಭಗಳು ದೊರಕಿವೆ. ಇದೇ ರೀತಿಯಲ್ಲಿ ಯಜ್ಞ ಯಾಗಾದಿಗಳಿಗೆ ಸಂಬಂಧಿಸಿದ ಶಾಸನಗಳನ್ನು ಹೊಂದಿದ ಯೂಪಸ್ತಂಭಗಳೂ ದೊರಕಿವೆ. ಶಿಲಾಶಾಸನಗಳ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ನಂದಿ ಮುಂತಾದವುಗಳು ಚಿತ್ರಿಸಲ್ಪಟ್ಟಿರುತ್ತವೆ. ಸೂರ್ಯ, ಚಂದ್ರ, ನಕ್ಷತ್ರಗಳು ಇರುವವರೆಗೂ ಈ ಶಾಸನವು ಇರತಕ್ಕದ್ದು ಎಂಬ ಆಶಯದಿಂದ ಈ ರೀತಿಯ ಚಿಹ್ನೆಗಳನ್ನು ಕೆತ್ತಿದ್ದರೆಂದು ಊಹಿಸಬಹುದು.

ಚಾಲುಕ್ಯ ಮತ್ತು ಹೊಯ್ಸಳರ ಕಾಲಗಳಲ್ಲಿ ವಿಗ್ರಹಗಳ ಪೀಠದ ಮೇಲೆ ಶಾಸನಗಳನ್ನು ಕೊರೆಯುವ ಪದ್ಧತಿಯು ಜನಾನುರಾಗಿಯಾಗಿದ್ದಿತು. ಹೊಯ್ಸಳ ದೇವಾಲಯಗಳ ವೈಶಿಷ್ಟ್ಯವೆಂದರೆ, ಆ ದೇವಾಲಯಗಳ ಶಿಲ್ಪಗಳನ್ನು ರೂಪಿಸಿದ ರೂವಾರಿಗಳ ಹೆಸರು, ಬಿರುದು ಮುಂತಾದವುಗಳನ್ನು ಕಲ್ಲಿನ ಮೇಲೆ ಕೆತ್ತುವುದು. ಮಲ್ಲಿತಮ್ಮ, ಚಾವಣ, ಕೇತಣ, ದೇವೋಜ, ದಾಸೋಜ, ನಾಗೋಜ, ಚಿಕ್ಕ ಹಂಪ ಮುಂತಾದ ನೂರಾರು ಶಿಲ್ಪಿಗಳ ಹೆಸರುಗಳು ಹೊಯ್ಸಳ ಶಿಲ್ಪಗಳ ಕೆಳಗೆ ರಾರಾಜಿಸುತ್ತಿದ್ದು, ಆ ಅಮರ ಶಿಲ್ಪಿಗಳ ಪರಿಚಯವನ್ನು ನಮಗೆ ಮಾಡಿಕೊಡುತ್ತವೆ. ಜೈನ ಧರ್ಮಕ್ಕೆ ಸಂಬಂಧಪಟ್ಟ ಕಲ್ಲಿನ ವಿಗ್ರಹಗಳ ಪೀಠಗಳ ಮೇಲೆ ಸುಮಾರು ಕ್ರಿ. ಶ. ಆರನೆಯ ಶತಮಾನದಿಂದ

ಶಾಸನಗಳನ್ನು ಕೆತ್ತುವುದು ವಿಶೇಷವಾಗಿ ಕಾಣಬರುತ್ತದೆ. ಈ ಶಾಸನಗಳಲ್ಲಿ ಆ ವಿಗ್ರಹವನ್ನು ಸ್ಥಾಪಿಸಿದ ರಾಜ ಇಲ್ಲವೇ ರಾಣಿಯ ಹೆಸರು, ಆದರ ವರ್ಷ, ಅವರು ಜೈನಧರ್ಮದ ಯಾವ ಪಂಥಕ್ಕೆ ಸೇರಿದವರು ಮುಂತಾದ ವಿವರಗಳನ್ನು ಕೊಡುತ್ತವೆ.

ದೇವಾಲಯಗಳ ಕಲ್ಲಿನ ಗೋಡೆಗಳ ಮೇಲೆ ಶಾಸನಗಳನ್ನು ಕೊರೆಯಿಸುವುದು ಬಹು ಸಾಮಾನ್ಯವಾದ ಪದ್ಧತಿಯಾಗಿದ್ದಿತು. ದೇವಾಲಯದ ಹೊರಗೋಡೆಯ ಒಂದು ತುದಿಯಿಂದ ಪ್ರಾರಂಭವಾಗಿ ಪ್ರದಕ್ಷಿಣೆಯಂತೆ ಮತ್ತೊಂದು ತುದಿಯವರೆಗೂ ಒಂದೇ ಸಾಲಿನಲ್ಲಿ ಇಲ್ಲವೇ ಹತ್ತಾರು ಸಾಲುಗಳಲ್ಲಿ ಕೆತ್ತಿರುವ ಶಾಸನಗಳೂ ಕಾಣಬರುತ್ತವೆ. ಮುಖ್ಯವಾಗಿ ದೇವಾಲಯದ ಗೋಡೆಗಳು, ವಿಗ್ರಹಗಳು, ಕಂಬಗಳು ಬಾಗಿಲುವಾಡ ಮುಂತಾದವುಗಳ ಮೇಲೆ ಶಾಸನಗಳು ಕಾಣಬರುತ್ತವೆ.

## ತಾಮ್ರಶಾಸನಗಳು

ಶಿಲಾಶಾಸನಗಳನ್ನು ಬಿಟ್ಟರೆ ಪ್ರಾಮುಖ್ಯತೆಯ ದೃಷ್ಟಿಯಿಂದ ತಾಮ್ರಶಾಸನಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಸಾಮಾನ್ಯವಾಗಿ ರಾಜ್ಯದ ಅಧಿಕೃತ ದಾಖಲೆಗಳು ತಾಮ್ರಶಾಸನದ ರೂಪದಲ್ಲಿಯೇ ಇರುತ್ತಿದ್ದವು. ದೀರ್ಘಾಕಾರದ ಅಥವಾ ಆಯಾಕಾರದ ತಾಮ್ರದ ದಪ್ಪ ತಗಡುಗಳನ್ನು ಮೊದಲು ತಯಾರಿಸಿ, ಅವುಗಳು ಒಂದೇ ಆಕಾರ ಮತ್ತು ಗಾತ್ರಗಳಿರುವಂತೆ ಕತ್ತರಿಸುತ್ತಿದ್ದರು. ಶಾಸನವನ್ನು ಬರೆಯಲು ಬೇಕಾದಷ್ಟು ಆ ರೀತಿಯ–ಅಂದರೆ ಒಂದು, ಎರಡು, ಮೂರು ಇತ್ಯಾದಿ ಸಂಖ್ಯೆಯ ತಗಡು

ಗಳನ್ನು ತಯಾರಿಸಿ ಅವುಗಳ ಎರಡು ಕಡೆಗಳಲ್ಲೂ ಅಕ್ಷರಗಳನ್ನು ಕೆತ್ತುತ್ತಿದ್ದರು. ಸಾಮಾನ್ಯವಾಗಿ ಪ್ರಾರಂಭದ ಅಂದರೆ ಮೊದಲನೆಯ ತಗಡಿನ ಮುಂಭಾಗ ಕೊನೆಯ ತಗಡಿನ ಹಿಂಭಾಗವನ್ನು ಖಾಲಿಯಾಗಿ ಬಿಡುತ್ತಿದ್ದರು. ಗುಮಾಸ್ತನು ತಯಾರಿಸಿಕೊಟ್ಟ ಶಾಸನದ ಪ್ರತಿಯನ್ನು ಶಾಸನವನ್ನು ಕೆತ್ತುವವನು ಚೂಪಾದ ಆಯುಧದಿಂದ ಕೆತ್ತುತ್ತಿದ್ದನು. ಈ ರೀತಿ ಶಾಸನಗಳನ್ನು ಕೆತ್ತಿದ ನಂತರ ಎಲ್ಲ ತಗಡುಗಳಲ್ಲಿಯೂ ರಂಧ್ರವನ್ನು ಮಾಡಿ ಆ ರಂಧ್ರದ



ತಾಮ್ರಶಾಸನ (ಮುದ್ರೆಸಹಿತ)



ಸದಾಶಿವರಾಯನ ತಾಮ್ರಶಾಸನ

(ಚಿತ್ರ. ಭಾರತ ಸರ್ಕಾರದ ಶಾಸನ ಶಾಖೆಯ ಕೃಪೆಯಿಂದ)

ಮೂಲಕ ತಾಮ್ರದ ಬಳೆಯುಳ್ಳ ಮುದ್ರೆಯ ಮೂಲಕ ಸೇರಿಸುತ್ತಿದ್ದರು. ಈ ಮುದ್ರೆಗಳು ರಾಜನ ಹೆಸರು, ಅವರ ಲಾಂಛನ ಮುಂತಾದವುಗಳನ್ನು ಹೊಂದಿದ್ದು, ಶಾಸನವು ಅಧಿಕೃತವಾದುದೆಂಬುದನ್ನು ತೋರಿಸಲು ಅನುಕೂಲ ವಾಗುತ್ತಿದ್ದಿತು. ಈ ರೀತಿಯ ನೂರಾರು ಶಾಸನಗಳು ಕರ್ನಾಟಕದಲ್ಲಿ ದೊರಕಿವೆ. ತಾಮ್ರವಲ್ಲದೆ ಬೆಳ್ಳಿ, ಚಿನ್ನ, ಕಂಚು, ಹಿತ್ತಾಳೆ ಮುಂತಾದ ತಗಡುಗಳನ್ನೂ ಶಾಸನಗಳಿಗಾಗಿ ಬಳಸು ತ್ತಿದ್ದರು. ಆದರೆ ಅವುಗಳು ತಾಮ್ರದಷ್ಟು ಜನಾನುರಾಗಿ ಯಾಗಿರಲಿಲ್ಲ. ತಾಮ್ರಶಾಸನಗಳು ಬಹು ಸುಂದರವಾಗಿದ್ದು ಅಕ್ಷರಗಳು ಸ್ಫುಟವಾಗಿದ್ದು ಕಲಾತ್ಮಕವಾಗಿರುತ್ತವೆ. ಅನೇಕ ಕಲ್ಲಿನ ಶಾಸನಗಳಂತೆ ಸಾಲುಗಳು ಡೊಂಕಾಗಿರುವುದಿಲ್ಲ.

ತಾಮ್ರ ಪತ್ರಗಳಲ್ಲದೆ, ಚಿನ್ನ, ಬೆಳ್ಳಿ, ತಾಮ್ರ, ಕಂಚು ಮುಂತಾದ ಲೋಹಗಳಿಂದ ಮಾಡಿದ ವಿಗ್ರಹಗಳ ಮೇಲೂ ಶಾಸನಗಳು ಕಾಣಬರುತ್ತವೆ.

ಕರ್ನಾಟಕದ ಶಾಸನಗಳನ್ನು ಅವುಗಳು ತಿಳಿಸುವ ವಸ್ತುವಿನ ದೃಷ್ಟಿಯಿಂದ ಎರಡು ಭಾಗಗಳಾಗಿ ವಿಭಾಗಿಸಬಹುದು.

## ದಾನ ಶಾಸನ

ನಾವು ಆಗಲೇ ಗಮನಿಸಿರುವಂತೆ ದಾನಧರ್ಮಗಳೇ ಶಾಸನಗಳಿಗೆ ಪ್ರೇರಕಶಕ್ತಿ. ಆದುದರಿಂದ ದಾನಶಾಸನಗಳ ಸಂಖ್ಯೆಯೂ ಬಲು ಜಾಸ್ತಿ. ದಾನಶಾಸನಗಳಲ್ಲಿ ಅತಿಮುಖ್ಯ ವಾದವು ದೇವಾಲಯುಗಳಿಗೆ ಕೊಟ್ಟ ದತ್ತಿಗಳು. ದೇವಾ ಲಯ ನಿರ್ಮಾಣ, ಕಟ್ಟಿಸಿದ ದೇವಾಲಯುಗಳ ಜೀರ್ಣೋ

ದ್ಧಾರ ಮುಂತಾದ ಧರ್ಮ ಕಾರ್ಯಗಳು ಕರ್ನಾಟಕದ ರಾಜರ, ಅಧಿಕಾರಿಗಳ ಮತ್ತು ಶ್ರೀಮಂತರ ಮುಖ್ಯ ಕರ್ತವ್ಯಗಳಲ್ಲೊಂದಾಗಿತ್ತು. ಇಂಥ ದಾನಿಗಳು ತಾವು ನಿರ್ಮಿಸಿದ ದೇವಾಲಯದ ವಿಷಯವನ್ನು ತಿಳಿಸುವ ಸಲುವಾಗಿ ದೇವಾಲಯದಲ್ಲಿ ಶಾಸನಗಳನ್ನು ಬರೆಯಿಸಿದ್ದಾರೆ. ರಾಜರು ಮತ್ತು ಮಂತ್ರಿಗಳು ತಮ್ಮ ಮತ್ತು ಪ್ರಜೆಗಳ ಕ್ಷೇಮಕ್ಕಾಗಿ ದೇವಾಲಯಗಳನ್ನು ಸಂದರ್ಶಿಸಿ ಅಲ್ಲಿನ ದೇವರುಗಳಿಗೆ ಸೇವೆಗಾಗಿ ಭೂಮಿಯನ್ನೋ ಚಿನ್ನದ ನಾಣ್ಯಗಳನ್ನೋ ದಾನಮಾಡಿ ಕೊಡುತ್ತಿದ್ದರು. ಅದೇ ರೀತಿಯಲ್ಲಿ ರಾಜರು ತಮ್ಮ ದಿಗ್ವಿಜಯ ಮಾರ್ಗದಲ್ಲಿ ದೇವಾಲಯಗಳಿಗೆ ಭೇಟಿಕೊಟ್ಟು, ತಮ್ಮ ಕಾರ್ಯಸಾಧನೆಗೋಸ್ಕರ ದೇವರನ್ನು ಪೂಜಿಸಿ ದತ್ತಿಗಳನ್ನು ಕೊಟ್ಟು ಮುಂದುವರೆಯುತ್ತಿದ್ದರು. ಈ ರೀತಿಯ ದಾನ ದತ್ತಿಗಳಿಲ್ಲದೇ ಹೋಗಿದ್ದರೆ ಕರ್ನಾಟಕದ ಎಷ್ಟೋ ದೇವಾಲಯಗಳು ಸೊರಗಿ ಅವನತಿಯನ್ನು ಹೊಂದುತ್ತಿದ್ದವು. ದೇವಾಲಯಗಳನ್ನು ಕಟ್ಟಿಸುವುದು ಸುಲಭ; ಆದರೆ ಕಟ್ಟಿಸಿದ ದೇವಾಲಯಗಳಲ್ಲಿ ದೇವರಿಗೆ ಪೂಜಾ ಕೈಂಕರ್ಯಗಳು ವ್ಯವಸ್ಥಿತ ರೀತಿಯಲ್ಲಿ ನಡೆಯುವಂತೆ ನೋಡಿಕೊಳ್ಳುವುದು ಕಷ್ಟ. ಆದುದರಿಂದ ನಮ್ಮ ಪೂರ್ವಜರು ದೇವಸ್ಥಾನಗಳಲ್ಲಿ ಪ್ರತಿನಿತ್ಯದ ಪೂಜೆ ಪುನಸ್ಕಾರಗಳು, ವಿಶೇಷ ದಿನಗಳಾದ ಗ್ರಹಣ, ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆ ಮುಂತಾದ ಧರ್ಮಕಾರ್ಯಗಳಿಗೆ ಬೇಕಾದ ದ್ರವ್ಯ ಸಹಾಯವನ್ನು ದಾನ-ದತ್ತಿಗಳ ಮೂಲಕ ಕೊಟ್ಟು, ದೇವಾಲಯಗಳು ಯಾವ ಅಡಚಣೆಗಳಿಲ್ಲದೆ ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಂಡು ಹೋಗುವಂತೆ ಏರ್ಪಾಟು ಮಾಡುತ್ತಿದ್ದರು. ಈ ರೀತಿಯ ದಾನ ದತ್ತಿ

ಗಳನ್ನು ಪ್ರಜೆಗಳ ಮತ್ತು ಇತರರ ತಿಳುವಳಿಕೆಗೋಸ್ಕರ ಶಾಸನ ರೂಪದಲ್ಲಿ ಕೆತ್ತಿಸಿ ನೆಡಿಸುತ್ತಿದ್ದರು.

ಕರ್ನಾಟಕದ ದಾನಶಾಸನಗಳು ದೇವಾಲಯಗಳಿಗೆ ಮಾತ್ರ ಸೀಮಿತವಾಗಿಲ್ಲ. ಕರ್ನಾಟಕವು ಪ್ರಾಚೀನ ಕಾಲ ದಿಂದಲೂ ವಿದ್ಯಾಕೇಂದ್ರ. ಇಲ್ಲಿ ನೂರಾರು ಪಾಠಶಾಲೆಗಳು. ವಿಶ್ವವಿದ್ಯಾನಿಲಯಗಳು ಹುಟ್ಟಿ ಸಹಸ್ರಾರು ವಿದ್ಯಾರ್ಥಿ ಗಳಿಗೆ ವಿದ್ಯಾದಾನ ಮಾಡಿ ಇಡೀ ಭಾರತದಲ್ಲೇ ಪ್ರಖ್ಯಾತ ವಾಗಿದ್ದವೆಂಬುದು ಎಲ್ಲರಿಗೂ ತಿಳಿದ ಸಂಗತಿ. ಕರ್ನಾಟಕದ ರಾಜರು, ಅಧಿಕಾರಿಗಳು ಮತ್ತು ಶ್ರೀಮಂತ ದಾನಿಗಳು ವಿದ್ಯಾ ಪಕ್ಷಪಾತಿಗಳಾಗಿದ್ದರು. ದೇವಸ್ಥಾನಗಳನ್ನು ಎಷ್ಟು ಧಾರ್ಮಿಕ ಭಾವನೆಯಿಂದ ಬೆಳೆಸಿದರೋ ಅಷ್ಟೇ ಆಸಕ್ತಿ ಯಿಂದ ವಿದ್ಯಾಕೇಂದ್ರಗಳನ್ನು ಬೆಳೆಸಿದರು. ಕರ್ನಾಟಕದಲ್ಲಿ ಮಠಗಳು, ಅಗ್ರಹಾರಗಳು, ಬ್ರಹ್ಮಪುರಿಗಳು ಮತ್ತು ಘಟಿಕಾ ಸ್ಥಾನಗಳೆಂಬ ವಿದ್ಯಾಕೇಂದ್ರಗಳಿರುತ್ತಿದ್ದವು. ಈ ಒಂದೊಂದರ ಸ್ವರೂಪವೂ ಸ್ವಲ್ಪ ಭಿನ್ನವಾದರೂ, ಅವೆಲ್ಲವೂ ವಿದ್ಯಾಕೇಂದ್ರಗಳಾಗಿದ್ದವು. ಕರ್ನಾಟಕದ ಶಾಸನಗಳಲ್ಲಿ ಈ ವಿದ್ಯಾಸಂಸ್ಥೆಗಳಿಗೆ ಬಿಟ್ಟುಕೊಟ್ಟ ದಾನಗಳ ವಿವರಗಳು ಹೇರಳ ವಾಗಿ ದೊರೆಯುತ್ತವೆ.

ಕರ್ನಾಟಕದ ಜನಜೀವನವನ್ನು ರೂಪಿಸುವಲ್ಲಿ ಧರ್ಮ ಗುರುಗಳು ವಿಶೇಷ ಪಾತ್ರವನ್ನು ವಹಿಸಿದ್ದಾರೆ. ಧರ್ಮ ಪ್ರಚಾರವು ಅವರ ಮೂಲಕ ವಿಶೇಷವಾಗಿ ನಡೆಯುತ್ತಿ ದ್ದಿತು. ಇದನ್ನು ತಿಳಿದಿದ್ದ ರಾಜಮಹಾರಾಜರು ಧಾರ್ಮಿಕ ಗುರುಗಳಿಗೆ ಮತ್ತು ಅವರ ಮಠಗಳಿಗೆ ವಿಶೇಷವಾದ ದಾನ ಗಳನ್ನು ಕೊಟ್ಟಿದ್ದಾರೆ. ಆದುದರಿಂದ ಈ ರೀತಿಯ ದಾನ ಶಾಸನಗಳು ಶೃಂಗೇರಿ, ಸೊನ್ನಲಿಗೆ, ಕೂಡಲಿ, ಉಡುಪಿ,

ಮೇಲುಕೋಟೆ ಮುಂತಾದ ನೂರಾರು ಮಠಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಈ ಶಾಸನಗಳಿಂದ ಈ ಮಠಗಳ ಮತ್ತು ಇಲ್ಲಿ ಬೆಳಗಿದ ಧರ್ಮಗುರುಗಳ ಪರಂಪರೆ ಮತ್ತು ಇತಿಹಾಸವನ್ನು ರಚಿಸಬಹುದು.

## ಸ್ಮಾರಕಶಾಸನಗಳು

ಎರಡನೆಯದಾಗಿ ಸ್ಮಾರಕಶಾಸನಗಳು ಬಹು ಮುಖ್ಯವಾದವು. ವೀರಪುರುಷರ, ವೀರಮಹಿಳೆಯರ, ರಾಜಮಹಾರಾಜರ ಮತ್ತು ಅಧಿಕಾರಿಗಳ ಅಥವ ಯಾವುದಾದರೊಂದು ಪರಾಕ್ರಮದ ಅಥವ ವಿಜಯದ ನೆನಪಾಗಿ ನೆಡಿಸುವ ಶಾಸನಗಳು ಕರ್ನಾಟಕದಲ್ಲಿ ವಿಶೇಷವಾಗಿವೆ. ಕರ್ನಾಟಕವು ಪ್ರಾಚೀನ ಕಾಲದಿಂದಲೂ ವೀರರ ನಾಡು. ವೀರರು ತಮ್ಮ ತಾಯ್ನಾಡಿನ ರಕ್ಷಣೆಗಾಗಿ ತಮ್ಮ ಪ್ರಾಣವನ್ನು ಅರ್ಪಿಸಿದ ಸಂಗತಿಗಳು ಕರ್ನಾಟಕ ಇತಿಹಾಸದ ಪುಟಗಳಲ್ಲಿ ತುಂಬಿ ತುಳುಕಾಡುತ್ತಿವೆ. ಇಂತಹ ವೀರ ಯೋಧರ ನೆನಪಿಗಾಗಿ ವೀರಗಲ್ಲು ಶಾಸನಗಳನ್ನು ಸ್ಥಾಪಿಸುತ್ತಿದ್ದರು. ಕನ್ನಡನಾಡಿನಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ವೀರಗಲ್ಲು ದೊರಕುತ್ತದೆಯೆಂದರೆ ಅತಿಶಯೋಕ್ತಿಯಲ್ಲ. ಇಂತಹ ವೀರಗಲ್ಲುಗಳ ಪರಿಚಯವನ್ನು ಮುಂದೆ ಮಾಡಿ ಕೊಳ್ಳೋಣ. ಇದೇ ರೀತಿಯಲ್ಲಿ ಸ್ತ್ರೀಯರು ತಮ್ಮ ಸ್ವಸಂತೋಷದಿಂದ ತಮ್ಮ ಪ್ರೀತಿ ಪಾತ್ರರಾದ ಪತಿಯ ಜೊತೆಯಲ್ಲಿ ಸಹಗಮನ ಮಾಡಿದ್ದುದನ್ನು ಸಾರಲು ಮಾಸ್ತಿ ಕಲ್ಲುಗಳು ಸ್ಥಾಪಿಸಲ್ಪಟ್ಟು, ಕರ್ನಾಟಕದ ವೀರವನಿತೆಯರ ಪಾತಿವ್ರತ್ಯ ಧರ್ಮಕ್ಕೆ ದ್ಯೋತಕವೆನಿಸಿವೆ.

ಈ ಮೇಲೆ ತಿಳಿಸಿದ ಎರಡು ವಿಭಾಗಕ್ಕೂ ಸೇರದೇ



ವೀರಗಲ್ಲು, ಬೇಗೂರು

(ಚಿತ್ರ ಭಾರತ ಸರ್ಕಾರದ ಶಾಸನ ಶಾಖೆಯ ಕೃಪೆಯಿಂದ)

ಇರುವ ಶಾಸನಗಳು ಬಹು ಕಡಿಮೆ. ಪೂರ್ತಿಯಾಗಿ ರಾಜಕೀಯ, ಆಡಳಿತ ಇಲ್ಲವೇ ವ್ಯಾಪಾರ ಮುಂತಾದ ಪ್ರಕಾರಗಳಿಗೇ ಮೀಸಲಾದ ಶಾಸನಗಳು ಅಲ್ಲಲ್ಲಿ ಕಂಡುಬರುತ್ತವೆಯಾದರೂ ಅವುಗಳ ಸಂಖ್ಯೆ ಕಡಿಮೆ. ಅಷ್ಟೇ ಅಲ್ಲದೆ ಅವುಗಳೂ ಕೂಡ ಒಂದಲ್ಲ ಒಂದು ರೀತಿಯಿಂದ ಈ ಮೇಲೆ ಹೇಳಿದ ದಾನ ಇಲ್ಲವೇ ಸ್ಮಾರಕ ಪ್ರಕಾರಗಳಿಗೆ ಸಂಬಂಧಿಸಿದ್ದಾಗಿದ್ದು ತಮ್ಮ ವಿಚಾರವನ್ನು ವಿಶೇಷವಾಗಿ ತಿಳಿಸುತ್ತವೆ.

## ರಚನಾಕ್ರಮ

ಶಾಸನಗಳನ್ನು ರಚಿಸುವುದಕ್ಕೋಸ್ಕರ ಸರ್ಕಾರದಲ್ಲಿ ಒಂದು ವಿಭಾಗವೇ ಇದ್ದಿತು. ಈ ವಿಭಾಗವು ಹಿರಿಯ ಸರಕಾರಿ ಅಧಿಕಾರಿಯ ನೇತೃತ್ವದಲ್ಲಿ ಕೆಲಸ ಮಾಡುತ್ತಿದ್ದಿತು. ಕರಣ, ಶಾಸನಾಧಿಕರಣ, ಲಿಪಿಕಾರ ಮುಂತಾದ ಅಧಿಕಾರಿಗಳು ಶಾಸನಗಳನ್ನು ಬರೆಯಿಸುವ ರೀತಿ, ಅವುಗಳ ಸತ್ಯಾಸತ್ಯತೆ ಮುಂತಾದ ವಿಚಾರಗಳನ್ನು ಗಮನಿಸುತ್ತಿದ್ದರು.

ಕರ್ನಾಟಕದ ಶಾಸನಗಳನ್ನು ಗಮನಿಸಿದರೆ, ಅವುಗಳು ಯಾವ ಪ್ರಕಾರಕ್ಕೆ ಸೇರಿದವುಗಳಾದರೂ, ಅವುಗಳಲ್ಲಿ ಒಂದು ವಿಧವಾದ ಏಕರೂಪತೆ ಕಾಣಬರುತ್ತದೆ. ಇದಕ್ಕೆ ಆ ಕಾಲದಲ್ಲಿದ್ದ ವ್ಯವಸ್ಥಿತ ಆಡಳಿತವೇ ಕಾರಣ. ಮೊದಮೊದಲು ಶಾಸನ ರಚನೆಯಲ್ಲಿ ವಿಶೇಷವಾದ ವ್ಯವಸ್ಥಿತ ಕ್ರಮವೇನೂ ಕಾಣಬರುವುದಿಲ್ಲ. ಶಾಸನಗಳು ಚಿಕ್ಕವಾಗಿ, ನೇರವಾಗಿ ವಿಷಯ ಪ್ರವೇಶ ಮಾಡುತ್ತಿದ್ದವು. ಕಾಲಕ್ರಮದಲ್ಲಿ ಒಂದು ಪದ್ಧತಿ ಬೆಳೆದುಬಂದಿತು. ಸಾಮಾನ್ಯವಾಗಿ ಒಂಬತ್ತು–ಹತ್ತನೆಯ ಶತಮಾನದಿಂದ ಈ ರೀತಿಯಾದ ಕ್ರಮವು ವಿಶೇಷವಾಗಿ ಬೆಳೆಯಿತು.

ಸಾಮಾನ್ಯವಾಗಿ ಶಾಸನಗಳು ಮಂಗಳಶ್ಲೋಕದೊಂದಿಗೆ ಪ್ರಾರಂಭವಾಗುತ್ತವೆ. ಈ ಶ್ಲೋಕಕ್ಕೂ ಮುಂಚೆ ಸಿದ್ಧಂ, ಓಂ ನಮಃ, ಓಂ ಸ್ವಸ್ತಿ, ಓಂ ನಮಶ್ಶಿವಾಯ ಮುಂತಾದವುಗಳು ಕಾಣಬರುತ್ತವೆ. ಮಂಗಳಶ್ಲೋಕಗಳು ಬುದ್ಧ, ಜಿನ, ವಿಷ್ಣು, ಈಶ್ವರ, ಬ್ರಹ್ಮ, ಸರಸ್ವತಿ ಮುಂತಾದ ದೇವತೆಗಳನ್ನು ಕೊಂಡಾಡುತ್ತವೆ. ಶೈವ ಶಾಸನಗಳಲ್ಲಿ ಸಾಮಾನ್ಯವಾಗಿ ಈ ಕೆಳಗಿನ ಶ್ಲೋಕವು ಕಾಣಬರುತ್ತದೆ.

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥

ವೈಷ್ಣವ ಶಾಸನಗಳಲ್ಲಿ ಈ ಕೆಳಗಿನ ಶ್ಲೋಕವು ಸಾಮಾನ್ಯವಾಗಿ ಕಾಣುಬರುತ್ತದೆ.

ಜಯತಿ ಅವಿಷ್ಕೃತಂ ವಿಷ್ಣೋಃ ವರಾಹಂ ಕ್ಷೋಭಿತಾರ್ಣವಂ ।
ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥

ಜೈನ ಶಾಸನಗಳಲ್ಲಿ

ಶ್ರೀಮತ್ ಪರಮಗಂಭೀರಸ್ಯಾದ್ವಾದಾಮೋಘಲಾಂಛನಮ್ ।
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥

ಎಂಬ ಶ್ಲೋಕವು ಕಾಣಸಿಗುತ್ತದೆ.

ಈ ರೀತಿಯ ಮಂಗಳಶ್ಲೋಕವಾದ ನಂತರ ರಾಜ್ಯವನ್ನಾಳುತ್ತಿರುವ ರಾಜನ ಬಿರುದುಗಳು ಮತ್ತು ಅವನ ಹೆಚ್ಚಳದ ವರ್ಣನೆ ಪ್ರಾರಂಭವಾಗುತ್ತದೆ. ಅನೇಕ ಕಡೆಗಳಲ್ಲಿ ರಾಜನ ವಂಶವೃಕ್ಷವನ್ನೂ ಹೇಳುತ್ತದೆ. ಆದ್ದರಿಂದ ಆಳುವ ರಾಜನ ಮತ್ತು ಹಿಂದಿನವರ ರಾಜಕೀಯ ಸಾಧನೆ ಮುಂತಾದ ವಿಷಯಗಳು ಚರಿತ್ರೆಯನ್ನು ರಚಿಸುವವನಿಗೆ ಸಹಾಯಕವಾಗುತ್ತವೆ. ಇವುಗಳು ಕಾವ್ಯಮಯವಾಗಿದ್ದು ಉತ್ಪ್ರೇಕ್ಷೆ. ಅಲಂಕಾರ ಮುಂತಾದವುಗಳಿಂದ ಕೂಡಿರು

ತ್ತವೆ. ಚರಿತ್ರಕಾರನು ಇವುಗಳನ್ನು ಎಚ್ಚರಿಕೆಯಿಂದ ಬಳಸಿಕೊಳ್ಳಬೇಕು. ಅನಂತರ ದೇಶದ ಪ್ರಶಂಸೆಯ ವಿಷಯವು ಬರುತ್ತದೆ. ಒಂದು ಹಳ್ಳಿಯ ವಿವರವನ್ನು ಹೇಳುವುದಕ್ಕೆ ಮೊದಲು ಭಾರತ ದೇಶದಲ್ಲಿ ಕುಂತಲ ಎಂಬ ಪ್ರಾಂತವು ಯಾವ ರೀತಿ ಉತ್ಕೃಷ್ಟವಾದುದೆಂದೂ, ಅದರಲ್ಲಿನ ಗಿಡ, ಮರ, ಫಲ, ಹೂ, ಖನಿಜ ಮುಂತಾದವುಗಳ ವರ್ಣನೆ; ಅನಂತರ ಕುಂತಲ ದೇಶದ ಸಣ್ಣ ವಿಭಾಗಗಳ ವರ್ಣನೆ; ಅದಾದ ಮೇಲೆ ಕೊನೆಗೆ ದಾನ ಕೊಡಬೇಕಾದ ಹಳ್ಳಿಯ ವರ್ಣನೆ; ಅದರಲ್ಲಿ ದಾನಕ್ಕಾಗಿ ಬಿಟ್ಟ ಹೊಲ, ಗದ್ದೆ ಅಥವಾ ಜಮೀನಿನ ಗಡಿಗಳು ಮುಂತಾದವನ್ನು ನಿರ್ದೇಶಿಸುವುದು. ಅಂದರೆ ಶಾಸನದ ನಿಜವಾದ ಉದ್ದೇಶ ಈ ಭಾಗದಲ್ಲಿ ವಿಶದವಾಗಿ ಹೇಳಲ್ಪಡುತ್ತದೆ. ದಾನಿ ಯಾರು–ದಾನವನ್ನು ಪಡೆಯುತ್ತಿರುವವರು ಯಾರು–ಆ ದಾನದ ಕಾರಣಗಳೇನು–ದಾನ ಕೊಟ್ಟವನ ಮತ್ತು ತೆಗೆದುಕೊಂಡವನ ಕುಲಗೋತ್ರಗಳ ವಿವರಣೆ–ಯಾತಕ್ಕಾಗಿ ದಾನವು ಕೊಡಲ್ಪಡುತ್ತಿದೆ–ಮುಂತಾದ ಎಲ್ಲ ವಿವರಗಳನ್ನೂ ಅನಂತರ ಹೇಳುತ್ತವೆ. ಇನ್ನು ಮುಕ್ತಾಯ ಭಾಗದಲ್ಲಿ ಕೊಟ್ಟ ದಾನವನ್ನು ಮುಂದಿನವರು ಕಾಪಾಡಬೇಕಾದ ಕರ್ತವ್ಯವನ್ನು ಕುರಿತು ಹೇಳಲಾಗುತ್ತದೆ. ಸಾಮಾನ್ಯವಾಗಿ ಶಾಸನಗಳ ಕೊನೆಯಲ್ಲಿ ಈ ಪದ್ಯವು ಬರುತ್ತದೆ.

ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಮ್ ।
ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಠಾಯಾಮ್ ಜಾಯತೇ ಕ್ರಿಮಿಃ ॥

ಅಂದರೆ ತಾವು ಕೊಟ್ಟಿದ್ದನ್ನು ಅಥವ ಇನ್ಯಾರಾದರೂ ಕೊಟ್ಟಿದ್ದನ್ನು ಯಾರು ಅಪಹರಿಸುತ್ತಾರೆಯೋ, ಅವರು ಅರವತ್ತು ಸಹಸ್ರ ವರ್ಷಗಳ ಕಾಲ ಹುಳುವಾಗಿ ಹುಟ್ಟಿ

ತ್ತಾರೆ ಎಂದು ಇದರ ಅರ್ಥ. ದಾನಗಳನ್ನು ಯಾರೂ ಅಪಹರಿಸದೇ ಇರಲಿ ಮತ್ತು ದಾನವು ಶಾಶ್ವತವಾಗಿ ನಡೆದುಕೊಂಡು ಬರಲಿ ಎನ್ನುವ ಉದ್ದೇಶದಿಂದ ಈ ರೀತಿಯ ಶ್ಲೋಕಗಳನ್ನು ಬರೆಯಿಸುತ್ತಿದ್ದರು. ಇನ್ನೂ ಕೆಲವು ಶಾಸನಗಳಲ್ಲಿ ಈ ದಾನಗಳನ್ನು ರಕ್ಷಿಸುವವನಿಗೆ ಉಂಟಾಗುವ ಪುಣ್ಯವನ್ನೂ; ಅದನ್ನು ಹಾಳುಮಾಡಿದವನಿಗೆ ಒದಗುವ ಪಾಪವನ್ನೂ ವಿಶದವಾಗಿ ವರ್ಣಿಸುತ್ತಾರೆ. ಅನೇಕ ಶಾಸನಗಳಲ್ಲಿ ಈ ರೀತಿಯ ಸಂಸ್ಕೃತ ಶ್ಲೋಕಕ್ಕೆ ಬದಲಾಗಿ ಕನ್ನಡದಲ್ಲೇ ಬರೆದಿರುವುದೂ ಉಂಟು. ಈ ಧರ್ಮವನ್ನು ಪಾಳಿಸದಿದ್ದರೆ ಬ್ರಹ್ಮಹತ್ಯಾದೋಷವು ಬರುವುದೆಂದೂ, ಪಾಲಿಸಿದರೆ ಪುಣ್ಯವು ಲಭಿಸುತ್ತದೆಯೆಂದೂ ಹೇಳಿರುತ್ತಾರೆ. ಒಟ್ಟಿನಲ್ಲಿ ಶಾಸನವು ಯಾವ ರೀತಿ ಮುಕ್ತಾಯವಾದರೂ ಅದನ್ನು ಪಾಲಿಸುವಂತೆ ಜನಗಳನ್ನು ಕೇಳಿಕೊಳ್ಳುವುದೇ ಈ ಮುಕ್ತಾಯ ಶ್ಲೋಕಗಳ ಅರ್ಥ

## ಶಾಸನದ ಲಿಪಿಗಳು

ಇದುವರೆವಿಗೂ ಶಾಸನದ ಬಾಹ್ಯ ಸ್ವರೂಪವನ್ನು ತಿಳಿದುಕೊಂಡೆವು. ಇನ್ನು ಶಾಸನಗಳ ಆಂತರಿಕ ಲಕ್ಷಣಗಳ ಪರಿಚಯವನ್ನು ಮಾಡಿಕೊಳ್ಳೋಣ. ಕರ್ನಾಟಕದಲ್ಲಿ ಅಶೋಕನ ಶಾಸನಗಳೇ ಅತ್ಯಂತ ಪ್ರಾಚೀನವಾದ ಶಾಸನಗಳು. ಕರ್ನಾಟಕದ ಶಾಸನ ಇತಿಹಾಸವು ಅಶೋಕನ ಶಾಸನಗಳಿಂದಲೇ ಪ್ರಾರಂಭವಾಗುತ್ತದೆ. ಹರಪ್ಪ, ಮೊಹೆಂಜೊದಾರೊ ಮುಂತಾದ ಸಿಂಧೂ ನದಿ ಸಂಸ್ಕೃತಿಯಲ್ಲಿ ದೊರಕಿರುವ ಮುದ್ರೆಗಳ ಲಿಪಿಗಳನ್ನು ಬಿಟ್ಟರೆ ಅಶೋಕನ ಶಾಸನಗಳ ಲಿಪಿಯೇ ಭಾರತದಲ್ಲೂ ಅತಿ ಪ್ರಾಚೀನವೆನ್ನಬಹುದು.

ಸಿಂಧೂಸಂಸ್ಕೃತಿಯ ಲಿಪಿಯು ಇನ್ನೂ ರಹಸ್ಯವಾಗಿಯೇ ಉಳಿದು ಅವುಗಳನ್ನು ಇದುವರೆವಿಗೂ ಯಾರೂ ಓದಿಲ್ಲ. ಹೀಗಾಗಿ ಶಾಸನ ಲಿಪಿಯ ವ್ಯವಸ್ಥಿತ ಅಧ್ಯಯನವು ಅಶೋಕನ ಶಾಸನಗಳ ಲಿಪಿಯಿಂದಲೇ ಪ್ರಾರಂಭವಾಗುತ್ತದೆ.

ಅಶೋಕನ ಶಾಸನಗಳು ಬ್ರಾಹ್ಮೀ ಮತ್ತು ಖರೋಷ್ಠೀ ಎಂಬ ಎರಡು ಮುಖ್ಯ ಲಿಪಿಗಳಲ್ಲಿದ್ದುವು. ಖರೋಷ್ಠೀ ಲಿಪಿಯು ಭಾರತದ ವಾಯುವ್ಯ ಗಡಿಪ್ರದೇಶದಲ್ಲಿ ಮಾತ್ರ ಬಳಕೆಯಲ್ಲಿದ್ದಿತು. ಬ್ರಾಹ್ಮೀ ಲಿಪಿಯಾದರೋ ಅಶೋಕನ ಎಲ್ಲ ಶಾಸನಗಳ ಲಿಪಿಯಾಗಿದ್ದಿತು. ಈ ಲಿಪಿಯು ಬ್ರಹ್ಮನಿಂದ ರಚಿತವಾದುದರಿಂದ ಇದಕ್ಕೆ ಬ್ರಾಹ್ಮೀ ಎಂಬ ಹೆಸರು ಬಂತು ಎಂದು ಜನರ ನಂಬಿಕೆ. ಆದರೆ ಪ್ರಾಚೀನ ಪ್ರಪಂಚದ ಕ್ಯೂನಿಫಾರಂ, ಫಿನೀಷಿಯನ್, ಅರಾಮೇಯಿಕ್, ಸಿಂಧೂ ಚಿತ್ರ ಲಿಪಿ ಮುಂತಾದ ಲಿಪಿಗಳಿಂದ ಒಂದಲ್ಲ ಒಂದು ರೀತಿಯಿಂದ ಪ್ರಭಾವಿತಗೊಂಡು ಭಾರತದ ಬ್ರಾಹ್ಮೀ ಲಿಪಿಯು ಹುಟ್ಟಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಇದರಲ್ಲಿ ವಿದ್ವಾಂಸರಲ್ಲಿಯೇ ಒಮ್ಮತವಿಲ್ಲ.

ಕರ್ನಾಟಕದ ಅಶೋಕನ ಶಾಸನಗಳಲ್ಲಿ ಬಳಸಿರುವ ದಕ್ಷಿಣ ಬ್ರಾಹ್ಮೀ ಲಿಪಿಯು ಸರಳವಾಗಿಯೂ ನೋಡಲು ಅಂದವಾಗಿಯೂ ಇರುವ ಲಿಪಿ. ಇಲ್ಲಿ ಅಕ್ಷರಗಳು ಉದ್ದುದ್ದವಾಗಿರುತ್ತವೆ. ಗುಂಡನೆಯ ಅಕ್ಷರಗಳು ಬಹು ಕಡಿಮೆ. ಈ ಅಕ್ಷರಗಳಿಗೆ ತಲೆಕಟ್ಟು ಇಲ್ಲದೇ ಇರುವುದನ್ನು ಗಮನಿಸಬೇಕು. ಈ ರೀತಿಯಾದ ಬ್ರಾಹ್ಮೀ ಲಿಪಿಯು ಕಾಲಕ್ರಮದಲ್ಲಿ ಬದಲಾವಣೆ ಹೊಂದಿ ಭಾರತದಲ್ಲಿ ಪ್ರಚಾರದಲ್ಲಿರುವ ಎಲ್ಲ ಲಿಪಿಗಳಿಗೂ ಮೂಲವಾಯಿತು. ಅದೇ ರೀತಿಯಲ್ಲಿ ನಾವು ಬರೆ

ಯುವ ಕನ್ನಡ ಲಿಪಿಗೂ ಅಶೋಕನ ಬ್ರಾಹ್ಮಿ ಲಿಪಿಗೂ ಸಾಮ್ಯವಿರುವುದಿಲ್ಲವೆಂಬುದನ್ನು ಮರೆಯಲಾಗುವುದಿಲ್ಲ.

## ಕನ್ನಡ ಲಿಪಿಯ ವಿಕಾಸ

ಕ್ರಿಸ್ತಪೂರ್ವ ಮೂರನೆಯ ಶತಮಾನದ ಅಶೋಕನ ಬ್ರಾಹ್ಮೀ ಲಿಪಿಯು ಕ್ರಿ.ಶ. ಒಂದನೆಯ ಶತಮಾನದ ಸಮಯಕ್ಕೆ ಅಂದರೆ ಶಾತವಾಹನ ರಾಜರ ಕಾಲಕ್ಕೆ ಬದಲಾವಣೆಯನ್ನು ಹೊಂದಿತು. ಅಕ್ಷರಗಳು ಅಗಲವಾಗುತ್ತ ಬಂದು ತಲೆಕಟ್ಟಿನ ಬದಲು ತ್ರಿಕೋಣಾಕಾರದ ತುದಿಯು ಕಾಣಬರುತ್ತದೆ. ಇದಾದ ಮುನ್ನೂರು–ನಾನೂರು ವರ್ಷಗಳಲ್ಲಿ ಈ ಲಿಪಿಯು ಇನ್ನೂ ಬದಲಾವಣೆಗಳನ್ನು ಹೊಂದಿತು. ಈ ಲಿಪಿಯನ್ನು ನಾವು ಕದಂಬರ ಶಾಸನಗಳಲ್ಲಿ ಕಾಣುತ್ತೇವೆ. ಕದಂಬ ಲಿಪಿಯನ್ನು ಕನ್ನಡ ಲಿಪಿಯ ಅತ್ಯಂತ ಪ್ರಾಚೀನ ರೂಪ ವೆಂದೂ ಕರೆಯಬಹುದು. ಆದರೆ ಈ ಕದಂಬ ಲಿಪಿಗೂ ಇಂದಿನ ಕನ್ನಡ ಲಿಪಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಇದೇ ಒಂದು ಬೇರೆ ಲಿಪಿ ಎನ್ನುವಷ್ಟು ಅಂತರವಿರುವುದು ಗೊತ್ತಾಗುತ್ತದೆ. ಕದಂಬ ಲಿಪಿಯಲ್ಲಿ ತಲೆಕಟ್ಟಿನ ಬದಲು ಪೆಟ್ಟಿಗೆಯಾಕಾರದ ತುದಿಗಳಿರುತ್ತವೆ. ಅಕ್ಷರಗಳ ಉದ್ದ ಕಡಿಮೆಯಾಗುತ್ತ ಬಂದು ಅಗಲ ಹೆಚ್ಚುತ್ತಾ ಹೋಗುತ್ತವೆ.

ಇನ್ನೂ ಸ್ವಲ್ಪ ಕಾಲ ಮುಂದೆ ಹೋದರೆ, ಅಂದರೆ ಕ್ರಿಸ್ತಶಕೆಯ ಆರು—ಏಳನೆಯ ಶತಮಾನಗಳಲ್ಲಿ ಕದಂಬ ಲಿಪಿಯು ಬದಲಾಗುತ್ತದೆ. ಚಚ್ಚೌಕವಾದ ಅಕ್ಷರಗಳು ಮಾಯವಾಗಿ ಅವು ಗುಂಡಾಗುತ್ತಾ ಬರುತ್ತವೆ. ಆದರೆ ತಲೆಕಟ್ಟು ಇನ್ನೂ ಬಂದಿರುವುದಿಲ್ಲ. ಬಾದಾಮಿ ಚಾಲುಕ್ಯರ

ಶಾಸನಗಳಲ್ಲಿ ತಲೆಕಟ್ಟನ್ನು ಸುಲಭವಾಗಿ ಗುರುತಿಸಬಹುದು. ಅಷ್ಟೊಂದು ಉದ್ದವಿಲ್ಲದಿದ್ದರೂ ಅದು ಪ್ರಾರಂಭದ ದೆಸೆಯಲ್ಲಿರುತ್ತದೆ. ಈ ಕಾಲದಲ್ಲಿ ಅಕ್ಷರಗಳ ಉದ್ದವು ಇನ್ನೂ ಕಡಿಮೆಯಾಗಿ ಅಗಲವು ಹೆಚ್ಚುತ್ತದೆ. ಗುಂಡನೆಯ ಅಕ್ಷರಗಳು ತಲೆದೋರುತ್ತವೆ.

ಸುಮಾರು ಹತ್ತು-ಹನ್ನೊಂದನೆಯ ಶತಮಾನಗಳಲ್ಲಿ ಕನ್ನಡ ಲಿಪಿಯ ಸ್ವರೂಪವು ವಿಶೇಷ ವಿಕಾಸವನ್ನು ವ್ಯಕ್ತಪಡಿಸುತ್ತದೆ. ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಕಂಡುಬರುವ ಈ ಲಿಪಿಯನ್ನು ಹಳಗನ್ನಡ ಲಿಪಿ ಎಂದೂ ಕರೆಯಬಹುದು. ಅಕ್ಷರಗಳು ಈ ಕಾಲದಲ್ಲಿ ಸ್ಥಿರವಾದ ರೂಪವನ್ನು ಪಡೆದವು. ತಲೆಕಟ್ಟು ಕಮಾನಿನಂತೆ ಬಾಗಿದ್ದು ಸ್ಪಷ್ಟವಾಗಿ ಕಾಣುತ್ತದೆ. ಇಲ್ಲಿಂದ ಮುಂದೆ ಕನ್ನಡದ ಬಹು ಅಕ್ಷರಗಳು ವಿಶೇಷ ಬದಲಾವಣೆಯಿಲ್ಲದೆ ಮುಂದುವರಿದವು. ಸುಮಾರು ಇದೇ ಸಮಯಕ್ಕೆ ಸೇರಬಹುದಾದ ಹೊಯ್ಸಳರ ಶಾಸನಗಳಲ್ಲಿ ಅಲಂಕಾರಯುಕ್ತವಾದ ಮತ್ತು ದುಂಡಾದ ಕನ್ನಡ ಅಕ್ಷರಗಳನ್ನು ಕಾಣಬಹುದು. ಹೊಯ್ಸಳರ ಶಾಸನಗಳೂ, ಅವುಗಳ ಅಕ್ಷರಗಳೂ, ಅವರ ಶಿಲ್ಪಗಳಷ್ಟೇ ಸುಂದರವಾದವು ಮತ್ತು ಕಲಾತ್ಮಕವಾದವು. ಹದಿನೈದನೆಯ ಶತಮಾನದ ವಿಜಯನಗರದ ಶಾಸನಗಳಲ್ಲಿ ಕನ್ನಡ ಲಿಪಿಯು ಡೊಂಕು ಡೊಂಕಾಗಿದ್ದರೂ ಸುಮಾರಾಗಿ ಈಗಿರುವಂತೆ ಕಾಣುತ್ತದೆ. ಆದುದರಿಂದ ಈ ಕಾಲದ ಶಾಸನಗಳ ಕನ್ನಡ ಲಿಪಿಯನ್ನು ಸುಮಾರಾಗಿ ಎಲ್ಲರೂ ಓದಬಹುದು. ಇದೇ ಲಿಪಿಯೇ ಮುಂದುವರಿದು ಇಂದು ನಾವು ಬರೆಯುತ್ತಿರುವ ಕನ್ನಡ ಲಿಪಿಯಾಗಿ ಪರಿಣಮಿಸಿದೆ.

ಆಯಾ ಕಾಲದ ಲಿಪಿ ಲಕ್ಷಣಗಳು ಎಷ್ಟರ ಮಟ್ಟಿಗೆ

ವಿಚಿತ್ರವಾಗಿದೆಯೆಂದರೆ, ಯಾವುದಾದರೂ ಶಾಸನದಲ್ಲಿ ತೇದಿಯನ್ನು ಹೇಳದೆ ಹೋಗಿದ್ದರೆ, ಆ ಶಾಸನದ ಕಾಲವನ್ನು ಲಿಪಿಯನ್ನು ನೋಡುವುದರಿಂದಲೇ ಹೇಳಬಹುದು. ಆದುದರಿಂದ ಲಿಪಿ ಲಕ್ಷಣಗಳು ಕಾಲ ನಿರ್ಣಯಕ್ಕೆ ಬಹು ಸಹಾಯಕವಾಗಿವೆ. ಈ ಶಾಸ್ತ್ರವನ್ನು ಪ್ರಾಚೀನ ಲಿಪಿಶಾಸ್ತ್ರ ಅಥವಾ ಪೇಲಿಯೊಗ್ರಫಿ ಎಂದು ಕರೆಯುತ್ತೇವೆ. ಈ ಶಾಸ್ತ್ರದ ಸಹಾಯದಿಂದ ಕೃತ್ರಿಮ ಶಾಸನಗಳನ್ನು ಕಂಡುಹಿಡಿಯಲು ಸುಲಭವಾಗಿ ಸಾಧ್ಯವಾಗುತ್ತದೆ. ಕೃತ್ರಿಮ ಶಾಸನವೆಂದರೆ ನಿಜವಲ್ಲದ ಶಾಸನ. ಹಳೆಯ ಕಾಲದ ಶಾಸನವನ್ನು ಅನಂತರದ ಕಾಲದಲ್ಲಿ ತಯಾರಿಸಿ ಶಾಸನದಲ್ಲಿ ಹೇಳಿರುವ ದಾನವೇ ಮುಂತಾದ ಪ್ರಯೋಜನವನ್ನು ಪಡೆಯಲು ಈ ರೀತಿಯ ಮೋಸ ಮಾಡಿರುವುದು ಉಂಟು. ಅಂತಹ ಮೋಸಗಳನ್ನು ಲಿಪಿಶಾಸ್ತ್ರಜ್ಞನು ಸುಲಭವಾಗಿ ಪತ್ತೆ ಹಚ್ಚಬಹುದು.

ಕರ್ನಾಟಕದ ಎಲ್ಲ ಶಾಸನಗಳನ್ನೂ ಕನ್ನಡ ಲಿಪಿಯಲ್ಲಿಯೇ ಬರೆದಿಲ್ಲ. ಅಶೋಕನ ಶಾಸನಗಳೆಲ್ಲವೂ ಬ್ರಾಹ್ಮೀ ಲಿಪಿಯಲ್ಲಿವೆ. ಆ ನಂತರದ ಅನೇಕ ಕರ್ನಾಟಕದ ಶಾಸನಗಳು ನಾಗರೀ ಲಿಪಿ, ತಮಿಳು ಲಿಪಿ, ತೆಲುಗು ಲಿಪಿ ಮತ್ತು ಮಧ್ಯಕಾಲೀನ ಮುಸ್ಲಿಂ ಶಾಸನಗಳು ಅರಾಬಿಕ್ ಮತ್ತು ಪರ್ಷಿಯನ್ ಲಿಪಿಗಳಲ್ಲಿಯೂ ಇವೆ. ಅದೇ ರೀತಿ ಕರ್ನಾಟಕದ ಶಾಸನಗಳು ಪ್ರಾಕೃತ, ಸಂಸ್ಕೃತ, ಕನ್ನಡ, ತಮಿಳು, ತೆಲುಗು, ಅರಾಬಿಕ್, ಮರಾಠೀ ಮುಂತಾದ ಭಾಷೆಗಳಲ್ಲೂ ಇವೆ.

ಸಾಮಾನ್ಯವಾಗಿ ಶಾಸನಗಳಲ್ಲಿ ಆ ಶಾಸನದ ಕಾಲವು ಹೇಳಲ್ಪಟ್ಟಿರುತ್ತದೆ. ದಾನಗಳನ್ನು ಸಾಮಾನ್ಯವಾಗಿ ವಿಶೇಷ ದಿನಗಳಲ್ಲಿ ಕೊಡುತ್ತಿದ್ದರು. ಅಂತಹ ವಿಶೇಷ ದಿನಗಳ

ವಿವರಗಳು ಶಾಸನಗಳಲ್ಲಿ ಕಾಣಬರುತ್ತವೆ. ಪ್ರಭವಾದಿ ವರ್ಷ, ತಿಂಗಳು, ತಿಥಿ, ನಕ್ಷತ್ರ, ವಾರ, ಗ್ರಹಣ, ವ್ಯತೀಪಾತ ಮುಂತಾದ ವಿವರಗಳು ಅನೇಕ ಶಾಸನಗಳಲ್ಲಿ ಕಾಣಬರುತ್ತವೆ. ಮತ್ತೆ ಕೆಲವು ಶಾಸನಗಳಲ್ಲಿ ಶಾಲಿವಾಹನ ಶಕೆಯ ವರ್ಷವು ಹೇಳಲ್ಪಟ್ಟಿರುತ್ತದೆ. ಕೊಟ್ಟಿರುವ ಶಾಲಿವಾಹನ ಶಕ ವರ್ಷಕ್ಕೆ ೭೮ ಎಂಬ ಸಂಖ್ಯೆಯನ್ನು ಸೇರಿಸಿದರೆ ಬರುವ ಮೊತ್ತವು ಕ್ರಿಸ್ತ ಶಕೆಯಾಗುತ್ತದೆ. ಮತ್ತೆ ಕೆಲವು ಶಾಸನಗಳಲ್ಲಿ ಆಳುವ ರಾಜನ ಆಳ್ವಿಕೆಯ ವರ್ಷವು ಮಾತ್ರ ಕಾಣಬರುತ್ತದೆ. ಮುಸಲ್ಮಾನರ ಶಾಸನಗಳಲ್ಲಿ ಹಿಜಿರ ಎಂಬ ಕಾಲಮಾನವು ಕಾಣಬರುತ್ತದೆ. ಶಾಸನಗಳಲ್ಲಿ ಕಾಲವು ದೊರಕುವುದರಿಂದ ಚರಿತ್ರಕಾರನಿಗೆ ತುಂಬ ಅನುಕೂಲವಾಗುತ್ತದೆ. ಯಾವ ರಾಜನು ಎಷ್ಟು ವರ್ಷ ರಾಜ್ಯವಾಳಿದನು ಮುಂತಾದ ವಿವರಗಳನ್ನು ತಿಳಿಯಲು ಇದು ಸಹಾಯಕವಾಗುತ್ತದೆ.

ನಾವು ಆಗಲೇ ಗಮನಿಸಿರುವಂತೆ ಕರ್ನಾಟಕದಲ್ಲಿ ಸಾವಿರಾರು ಶಾಸನಗಳಿವೆ. ಅವುಗಳು ಕರ್ನಾಟಕದ ಚರಿತ್ರೆ ಧರ್ಮ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ, ಕಲೆ, ಸಂಸ್ಕೃತಿ ಮುಂತಾದ ವಿವಿಧ ವಿಷಯಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಆದುದರಿಂದ ಶಾಸನಗಳನ್ನು ಇತಿಹಾಸದ ಕಣಜವೆಂದು ಕರೆಯುತ್ತಾರೆ. 'ಶಾಸನವೇ ಬೇರು ಇತಿಹಾಸವೇ ಫಲ' ಎಂದೂ ಹೇಳುತ್ತಾರೆ. ಶಾಸನಗಳ ಸಹಾಯವಿಲ್ಲದಿದ್ದರೆ ನಮ್ಮ ಇತಿಹಾಸದ ಅನೇಕ ಪುಟಗಳು ಖಾಲಿಯಾಗಿಯೇ ಇರಬೇಕಾದ ಪರಿಸ್ಥಿತಿ ಒದಗುತ್ತಿದ್ದಿತು.

ಇತಿಹಾಸ ರಚನೆಗೆ ಸಾಹಿತ್ಯ ಸಾಮಗ್ರಿಗಳು ದೊರಕುತ್ತವೆಯೆಂದು ಅನ್ನಬಹುದು. ಆದರೆ ಸಾಹಿತ್ಯ ಗ್ರಂಥಗಳಲ್ಲಿ

ಪಕ್ಷಪಾತ, ಉತ್ಪ್ರೇಕ್ಷೆ, ಅಲಂಕಾರ ಮುಂತಾದವುಗಳು ವಿಶೇಷವಾಗಿರುತ್ತವೆ. ವರ್ಣನೆಗಳನ್ನು ಮಾಡುವಾಗ ಕವಿಯು ತನ್ನ ಪ್ರತಿಭೆಗೆ ತಕ್ಕಂತೆ ಸ್ಫೂರ್ತಿಗೆ ತಕ್ಕಂತೆ ಇತಿಹಾಸ ವಸ್ತುವನ್ನೂ ವರ್ಣಿಸುತ್ತಾನೆ. ಆದರೆ ಶಾಸನಗಳು ಹಾಗಲ್ಲ. ಇರುವ ವಿಚಾರವನ್ನು ಇದ್ದಂತೆ ತಿಳಿಸುತ್ತವೆ. ಉತ್ಪ್ರೇಕ್ಷೆಗೆ ಅವಕಾಶ ಕಡಿಮೆ. ಅಷ್ಟೇ ಅಲ್ಲದೆ ಕವಿಗಳು ತಾವು ಕಾಣದೇ ಇದ್ದ ಸಂಗತಿಗಳನ್ನು ಇತರರಿಂದ ತಿಳಿದು ಅದರ ಬಗ್ಗೆ ಗ್ರಂಥಗಳನ್ನು ರಚಿಸುತ್ತಾರೆ. ಅಂದರೆ ಕವಿಯು ವರ್ಣಿಸುವ ರಾಜನ ಸಮಕಾಲೀನನಲ್ಲದಿರಬಹುದು. ಆ ರಾಜನು ಸತ್ತು ಕೀರ್ತಿವಂತನಾದ ಎಷ್ಟೋ ವರ್ಷಗಳ ಅನಂತರ ಕವಿಯು ಆ ರಾಜನನ್ನು ತನ್ನ ಕಾವ್ಯದ ವಸ್ತುವನ್ನಾಗಿ ಮಾಡಿಕೊಳ್ಳಬಹುದು. ಆದರೆ ಶಾಸನಗಳು ಹಾಗಲ್ಲ. ತಾವು ತಿಳಿಸುವ ವಸ್ತುವಿಗೆ ಸಮಕಾಲೀನವಾಗಿರುತ್ತವೆ. ಹೀಗಾಗಿ ಶಾಸನಗಳು ಆಧಾರಭೂತವಾದ ಇತಿಹಾಸ ಸಾಮಗ್ರಿಗಳು. ನಮ್ಮ ದೇಶದಲ್ಲಂತೂ ಶಾಸನಗಳೇ ಇತಿಹಾಸ ರಚನೆಗೆ ಜೀವಾಳವಾಗಿವೆ. ರವಿಕೀರ್ತಿಯೆಂಬ ಕವಿಯು ರಚಿಸಿದ ಪುಲಿಕೇಶಿಯ ಐಹೊಳೆ ಶಾಸನವು ನಮಗೆ ದೊರಕದೇ ಇದ್ದಿದ್ದರೆ, ಕರ್ನಾಟಕದ ಅತ್ಯಂತ ಪ್ರಖ್ಯಾತನಾದ ಇಮ್ಮಡಿ ಪುಲಿಕೇಶಿಯ ಹೆಚ್ಚಳ, ಖ್ಯಾತಿ, ಶೌರ್ಯ, ಪರಾಕ್ರಮ ಮುಂತಾದ ಗುಣಗಳು ನಮಗೆ ತಿಳಿಯುತ್ತಲೇ ಇರಲಿಲ್ಲ. ಆದುದರಿಂದ ಇತಿಹಾಸಕಾರನು ಶಾಸನಶಾಸ್ತ್ರಜ್ಞನಿಗೆ ಋಣಿಯಾಗಿರಬೇಕು.

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗಳನ್ನು ಪ್ರತಿಬಿಂಬಿಸುವ ಕೆಲವು ಮುಖ್ಯ ಶಾಸನಗಳನ್ನು ಪರಿಚಯ ಮಾಡಿಕೊಳ್ಳೋಣ.

## ಅಶೋಕನ ಶಾಸನಗಳು

ಅಶೋಕನ ಶಾಸನಗಳು ಕರ್ನಾಟಕದ ಇತಿಹಾಸದಲ್ಲಿ ಮಾತ್ರವಲ್ಲದೆ ಭಾರತೀಯ ಇತಿಹಾಸದಲ್ಲಿಯೂ ಪ್ರಾಮುಖ್ಯತೆ ಗಳಿಸಿವೆ. ಕರ್ನಾಟಕದಲ್ಲಂತೂ ಅವುಗಳೇ ಅತ್ಯಂತ ಪ್ರಾಚೀನ ಶಾಸನಗಳು. ಅಶೋಕನ ವ್ಯಕ್ತಿತ್ವ ತಿಳಿಯುವುದು ಅವನ ಶಾಸನ ಗಳಿಂದ, ಇವುಗಳಿಲ್ಲದೇ ಹೋಗಿದ್ದರೆ ಭಾರತದ ಶ್ರೇಷ್ಠ ಚಕ್ರವರ್ತಿಗಳಲ್ಲೊಬ್ಬನಾದ, ಧರ್ಮದೂತನಾದ ಅಶೋಕನ ಹಿರಿಮೆ ನಮಗೆ ತಿಳಿಯುತ್ತಲೇ ಇರಲಿಲ್ಲ,

ಅಶೋಕನ ಶಾಸನಗಳಲ್ಲಿ ಲಘುಪ್ರಸ್ತರಲೇಖ ಎಂಬು ದೊಂದು ಪ್ರಕಾರ. ಈ ಪ್ರಕಾರದ ಆರು ಶಾಸನಗಳು ಕರ್ನಾಟಕ ದಲ್ಲೇ ದೊರಕಿರುವುದು ಹೆಮ್ಮೆಯ ಸಂಗತಿ. ಇವುಗಳು ದೊರಕಿರುವ ಸ್ಥಳಗಳೆಂದರೆ ಬ್ರಹ್ಮಗಿರಿ, ಸಿದ್ದಾಪುರ, ಮಾಸ್ಕಿ, ಕೊಪ್ಪಳ, ಜಟಿಂಗರಾಮೇಶ್ವರ. ಇವು ಕಲ್ಲಿನ ಮೇಲೆ ಬರೆಯ ಲಾದ ಚಿಕ್ಕ ಶಾಸನಗಳು. ಮಾಸ್ಕಿಯಲ್ಲಿ ದೊರೆತ ಅಶೋಕನ ಶಾಸನಕ್ಕೆ ವಿಶೇಷ ಮಹತ್ವವಿದೆ. ಅಶೋಕನ ಶಾಸನಗಳಲ್ಲಿ ಅಶೋಕ ಎಂಬ ಹೆಸರು ಕಾಣಿಸಿಕೊಳ್ಳುವುದಿಲ್ಲ. ಅವುಗಳ ಬದಲು ಅವನ ನೆಚ್ಚಿನ ಬಿರುದಾದ ದೇವನಾಂಪ್ರಿಯ, ಪ್ರಿಯ ದರ್ಶಿ ಮುಂತಾದವುಗಳೇ ಇರುತ್ತಿದ್ದವು. ಆದರೆ ಮಾಸ್ಕಿಯ ಶಾಸನದಲ್ಲಿ ಮೊಟ್ಟಮೊದಲನೆಯ ಬಾರಿಗೆ ಅಶೋಕ ಎಂಬ ಹೆಸರು ಕಂಡು ಬಂದಿತು. ಆದುದರಿಂದ ದೇವನಾಂಪ್ರಿಯ, ಪ್ರಿಯದರ್ಶಿ ಎಂಬ ಬಿರುದುಳ್ಳವನು ಅಶೋಕನೇ ಎಂದು ಖಚಿತ ವಾಯಿತು. ಈ ಖಚಿತತೆಯನ್ನು ಮೊದಲು ಒದಗಿಸಿದ ಕೀರ್ತಿ ಕರ್ನಾಟಕದ ಮಾಸ್ಕಿ ಶಾಸನಕ್ಕೆ ದೊರೆಯುತ್ತದೆ.

ಅಶೋಕನು ತನ್ನ ಈ ಶಾಸನಗಳಲ್ಲಿ ಹೇಳಿರುವ ಮಾತು



ಅಶೋಕನ ಬ್ರಹ್ಮಗಿರಿ ಶಾಸನದ ಒಂದು ಭಾಗ

ಗಳು ನಿತ್ಯಸತ್ಯವಾಗಿದ್ದು ಇಂದಿಗೂ ಅವುಗಳನ್ನು ಅನ್ವಯಿಸ ಬಹುದು. ಮಾಸ್ಕಿ ಶಾಸನದಲ್ಲಿ ಅಶೋಕನು ಈ ರೀತಿ ಹೇಳು ತ್ತಾನೆ : "ನಾನು ಸಾಧಿಸಿದ ಈ ಧರ್ಮವನ್ನು ಬಡವನಾದರೂ ಸಾಧಿಸಬಹುದು. ಆದರೆ ಅವನಿಗೆ ಧರ್ಮದಲ್ಲಿ ಆಸಕ್ತಿ ಬಲು ಮುಖ್ಯ. ಇದು ಕೇವಲ ಶ್ರೀಮಂತರಿಗೆ ಮಾತ್ರ ಸಾಧ್ಯ ಎಂದು ಯಾರೂ ತಿಳಿಯಬಾರದು. ಬಡವರಾಗಲಿ, ಶ್ರೀಮಂತರಾಗಲಿ–ನೀವು ಧರ್ಮಮಾರ್ಗವನ್ನು ಅನುಸರಿಸಿದರೆ ಈ ಧರ್ಮಸಾಧನೆಯು ಬಹುಕಾಲ ಬಾಳುತ್ತದೆ ಮತ್ತು ಅಭಿವೃದ್ಧಿಯಾಗುತ್ತದೆ." ಬ್ರಹ್ಮಗಿರಿ ಶಾಸನದಲ್ಲಿ ಅಶೋಕನು ಹೀಗೆ ಹೇಳುತ್ತಾನೆ : "ತಾಯಿ, ತಂದೆ ಮತ್ತು ಹಿರಿಯರ ಆಜ್ಞೆಯನ್ನು ಪಾಲಿಸಬೇಕು. ಪ್ರಾಣಿಗಳಲ್ಲಿ ದಯೆ ತೋರಿಸಬೇಕು. ಸತ್ಯವನ್ನೇ ನುಡಿಯಬೇಕು. ಈ ರೀತಿಯ ಧರ್ಮಗುಣಗಳನ್ನು ಆಚರಿಸಬೇಕು. ಶಿಷ್ಯನು ಗುರುಗಳಿಗೆ ಗೌರವವನ್ನು ತೋರಿಸಬೇಕು. ಬಂಧು ಮಿತ್ರರೊಡನೆ ಯೋಗ್ಯ ರೀತಿಯಿಂದ ನಡೆಯಬೇಕು. ಇದು ಪುರಾತನವಾದ ನಿಯಮ. ಇದರಿಂದ ದೀರ್ಘಾಯುಷ್ಯವನ್ನು ಪಡೆಯಬಹುದು. ಈ ರೀತಿ ಪ್ರತಿಯೊಬ್ಬನೂ ನಡೆದುಕೊಳ್ಳಬೇಕು." ಈ ರೀತಿ ಅಶೋಕನ ಶಾಸನಗಳು ನಮ್ಮ ಸಂಸ್ಕೃತಿಯ ಮೂಲತತ್ತ್ವಗಳನ್ನು ಎಲ್ಲರಿಗೂ ಅರ್ಥವಾಗುವಂತೆ ತಿಳಿಸುತ್ತವೆ. ಕಳಿಂಗ ಯುದ್ಧದಲ್ಲಿ ಉಂಟಾದ ನರಹತ್ಯೆ, ಹಿಂಸೆ ಮುಂತಾದವುಗಳಿಂದ ಮನನೊಂದ ಅಶೋಕನು ತನ್ನ ಇತರ ಶಾಸನಗಳಲ್ಲಿಯೂ ಧರ್ಮಾಚರಣೆಯ ವಿಚಾರವನ್ನೇ ಹೇಳಿದ್ದಾನೆ. ಅವುಗಳನ್ನು ಅರ್ಥಮಾಡಿಕೊಂಡರೆ ನಮ್ಮ ಜೀವನವೂ ಸುಖಮಯವಾಗುವುದು.

## ತಾಳಗುಂದ ಶಾಸನ

ತಾಳಗುಂದದ ಕದಂಬರಾಜ ಶಾಂತಿವರ್ಮನ ಶಾಸನವು ಕರ್ನಾಟಕದ ಮುಖ್ಯ ಶಾಸನಗಳಲ್ಲೊಂದು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಎಂಬ ಗ್ರಾಮದಲ್ಲಿ ಈ ಶಾಸನವು ದೊರಕಿದೆ. ಇದು ಕದಂಬ ವಂಶ ಸ್ಥಾಪನೆಯ ಬಗೆಗೆ ವಿಶೇಷ ಬೆಳಕನ್ನು ಚೆಲ್ಲುತ್ತದೆ. ಮಾನವ್ಯಗೋತ್ರಕ್ಕೆ ಸೇರಿದ ಬ್ರಾಹ್ಮಣ ವಂಶದ ಮಯೂರಶರ್ಮನೆಂಬುವನು ವೇದಾಧ್ಯಯನಗಳನ್ನು ಮಾಡಿಕೊಂಡಿದ್ದನು. ಇವನು ಆಗಿನ ಕಾಲದಲ್ಲಿ ಪ್ರಸಿದ್ಧವೆನಿಸಿದ್ದ ಕಾಂಚೀಪಟ್ಟಣದ ವಿದ್ಯಾಸಂಸ್ಥೆಯೊಂದರಲ್ಲಿ ಹೆಚ್ಚಿನ ವಿದ್ಯೆಯನ್ನು ಕಲಿಯುವ ಆಸೆಯಿಂದ ಅಲ್ಲಿಗೆ ಹೋಗಿ ಆ ಘಟಿಕಾಸ್ಥಾನವನ್ನು ಸೇರಿದನು. ಹೀಗಿರುವಾಗ ಒಂದು ದಿನ ಕಾಂಚಿಯ ರಾಜವಂಶದ ಪಲ್ಲವರ ಸೈನ್ಯದ ಯೋಧನೊಬ್ಬನು ಮಯೂರಶರ್ಮನನ್ನು ಅಪಮಾನಿಸಿದನು. ಮಯೂರಶರ್ಮನು ವೀರ ಕನ್ನಡಿಗ. ತನಗಾದ ಅವಮಾನವನ್ನು ಸಹಿಸದಾದನು. ಅವನಲ್ಲಿ ಸುಪ್ತವಾಗಿದ್ದ ಕನ್ನಡತನ, ಕನ್ನಡಿಗನ ಕೆಚ್ಚು ಜಾಗೃತವಾಯಿತು. ಕೂಡಲೇ ಅವನು ತಾನು ಕಲಿಯಬೇಕೆಂದುಕೊಂಡಿದ್ದ ಬ್ರಹ್ಮವಿದ್ಯೆಯನ್ನು ತ್ಯಜಿಸಿ ಕ್ಷಾತ್ರವಿದ್ಯೆಯ ಮರೆಹೊಕ್ಕನು. ದರ್ಭೆಯೇ ಮುಂತಾದ ಹೋಮ ಸಾಮಗ್ರಿಗಳನ್ನು ಎಸೆದು ಬಿಲ್ಲು ಬಾಣವೇ ಮೊದಲಾದ ಆಯುಧಗಳನ್ನು ತೆಗೆದುಕೊಂಡು ಪಲ್ಲವರನ್ನು ಸೋಲಿಸಿ ತನ್ನದೇ ಆದ ರಾಜ್ಯವನ್ನು ಕಟ್ಟಿದನು. ಅನೇಕ ಸಣ್ಣಪುಟ್ಟ ರಾಜರನ್ನು ಸೋಲಿಸಿ ಅವರಿಂದ ಕಪ್ಪ ಕಾಣಿಕೆಗಳನ್ನು ವಸೂಲು ಮಾಡಿದನು. ಇವನಿಂದ ಸ್ಥಾಪಿಸಲ್ಪಟ್ಟ ಕದಂಬ ವಂಶದಲ್ಲಿ ಅನೇಕ ರಾಜರು ಆಳಿ, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಅಮರ

ರಾಗಿದ್ದಾರೆ. ಈ ರೀತಿಯು ಮಯೂರಶರ್ಮನ ಮಹತ್‍ಸಾಧನೆಯನ್ನು ಹೃದಯಂಗಮವಾಗಿ ವರ್ಣಿಸುತ್ತದೆ ತಾಳಗುಂದದ ಶಾಸನ.

ಇದೇ ರಾಜನ ಚಂದ್ರವಳ್ಳಿ ಶಾಸನವು ಕೇವಲ ಮೂರು ಸಾಲುಗಳಲ್ಲಿದೆಯಾದರೂ ಇತಿಹಾಸದ ದೃಷ್ಟಿಯಿಂದ ಮುಖ್ಯವಾದುದು. ಮಯೂರಶರ್ಮನು ತ್ರೈಕೂಟ, ಆಭೀರ, ಪಲ್ಲವ, ಪಾರಿಯಾತ್ರಕ, ಶಕಸ್ಥಾನ, ಸೇಂದ್ರಕ, ಪುನ್ನಾಟ, ಮೌಖರಿ ಮುಂತಾದ ರಾಜ್ಯಗಳ ಮೇಲೆ ಸಂಪಾದಿಸಿದ ವಿಜಯವನ್ನು ಈ ಶಾಸನ ತಿಳಿಸುತ್ತದೆ.

## ಹಲ್ಮಿಡಿ ಶಾಸನ

ಸುಮಾರು ಕ್ರಿಸ್ತಶಕೆಯ ಐದನೆಯ ಶತಮಾನಕ್ಕೆ ಸೇರುವ ಹಲ್ಮಿಡಿ ಶಾಸನವು ಕನ್ನಡ ಭಾಷೆಯಲ್ಲಿ ದೊರೆತಿರುವ ಅತ್ಯಂತ ಹಳೆಯ ಶಾಸನ. ಕನ್ನಡ ಭಾಷಾಶಾಸ್ತ್ರದ ದೃಷ್ಟಿಯಿಂದ ಇದೊಂದು ಮಹತ್ತರ ಶಾಸನ. ಹಲ್ಮಿಡಿ ಗ್ರಾಮವು ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನದೆ. ಮೃಗೇಶ ಮತ್ತು ನಾಗ ಎಂಬುವರು ಯುದ್ಧದಲ್ಲಿ ಹೋರಾಡಿ ಜಯಶೀಲನಾದ ವಿಜಅರಸ ಎಂಬುವನಿಗೆ ಎರಡು ಗ್ರಾಮಗಳನ್ನು ಶೌರ್ಯದ ಕೊಡುಗೆಯಾಗಿ ಕೊಟ್ಟರು ಎಂಬುದು ಶಾಸನದ ತಾತ್ಪರ್ಯ. ಆದರೆ ಇಲ್ಲಿ ಬಳಕೆಯಾಗಿರುವ ಕನ್ನಡ ಪದಗಳಾದ ನಾಡುಳ್, ಕೀಳ್ಗೊಣ್, ಪಿಟ್ಟಾರ್ ಮುಂತಾದವು ಹಳಗನ್ನಡದ ರೂಪಗಳಿಗಿಂತ ಇನ್ನೂ ಪ್ರಾಚೀನವಾದವು ಎಂಬುದನ್ನು ತೋರಿಸು



ಹಲ್ಮಿಡಿ ಶಾಸನ

ತ್ತವೆ. ಅಂದರೆ ಕನ್ನಡ ಭಾಷೆಯು ಪ್ರಾರಂಭದ ದೆಸೆಯಲ್ಲಿ ಯಾವ ರೀತಿ ಇದ್ದಿತೆಂಬುದನ್ನು ಹಲ್ಮಿಡಿ ಶಾಸನದ ಕನ್ನಡ ತೋರಿಸುತ್ತದೆ. ಇದೇ ಭಾಷೆಯು ಕಾಲಾನುಕ್ರಮದಲ್ಲಿ ಬೆಳೆದು ಹಳಗನ್ನಡ, ನಡುಗನ್ನಡ, ಈಚಿನ ಕನ್ನಡಗಳಾಗಿ ವಿಕಾಸ ಹೊಂದಿತು. ಇದಕ್ಕಿಂತ ಹಳೆಯ ಕನ್ನಡ ಶಾಸನ ಸಿಕ್ಕಿದಲ್ಲಿ ಕನ್ನಡ ಭಾಷೆಯು ಅತ್ಯಂತ ಪ್ರಾಚೀನ

ಸ್ಥಿತಿಯು ನಮಗೆ ತಿಳಿಯುತ್ತದೆ. ಆ ಶಾಸನವು ಸಿಕ್ಕುವ ವರೆಗೂ ಹಲ್ಮಿಡಿಶಾಸನವೇ ಕನ್ನಡ ಭಾಷೆಯ ಅತ್ಯಂತ ಪುರಾತನ ಶಾಸನವೆಂಬ ಕೀರ್ತಿಗೆ ಪಾತ್ರವಾಗುತ್ತದೆ.

## ಐಹೊಳೆ ಶಾಸನ

ಇಮ್ಮಡಿ ಪುಲಿಕೇಶಿಯ ಐಹೊಳೆ ಶಾಸನ ಕರ್ನಾಟಕ ಶಾಸನ ಸಂಪತ್ತಿನಲ್ಲಿ ಬಲು ಮುಖ್ಯವಾದುದು. ಈ ಶಾಸನವು ಐಹೊಳೆ ಗ್ರಾಮದ ಮೇಗುತಿ ದೇವಾಲಯದ ಗೋಡೆಯ ಮೇಲಿದೆ. ಇದರ ಕಾಲ ಕ್ರಿ. ಶ. ೬೩೪–೩೫. ಹಳಗನ್ನಡ ಲಿಪಿಯಲ್ಲಿಯೂ ಸಂಸ್ಕೃತ ಭಾಷೆಯಲ್ಲಿಯೂ ರವಿಕೀರ್ತಿ ಎಂಬ ಕವಿಯು ಈ ಶಾಸನವನ್ನು ಬರೆದಿದ್ದಾನೆ. ಈ ಶಾಸನ ನಮಗೆ ಸಿಕ್ಕದೇ ಹೋಗಿದ್ದರೆ, ಉತ್ತರ ಭಾರತದ ಚಕ್ರವರ್ತಿ ಹರ್ಷ ವರ್ಧನನನ್ನೇ ಸೋಲಿಸಿದ ವೀರ ಕನ್ನಡಿಗ ಇಮ್ಮಡಿ ಪುಲಿಕೇಶಿಯ ಪೆಚ್ಚಳ, ಧೈರ್ಯ ಸ್ಥೈರ್ಯಗಳು ನಮಗೆ ವಿಶದವಾಗಿ ತಿಳಿಯುತ್ತಿರಲಿಲ್ಲ. ಆದುದರಿಂದ ಈ ಶಾಸನವು ಐತಿಹಾಸಿಕ ಮಹತ್ವವುಳ್ಳದ್ದಾಗಿದೆ.

ಜಿನಸ್ತುತಿಯಿಂದ ಪ್ರಾರಂಭವಾಗುವ ಈ ಶಾಸನವು ಚಾಲುಕ್ಯ ರಾಜರ ವಂಶಾವಳಿಯನ್ನು ತಿಳಿಸುತ್ತದೆ. ಅನಂತರ ಇಮ್ಮಡಿ ಪುಲಿಕೇಶಿಯ ವಿಜಯಗಳನ್ನು ವರ್ಣಿಸುತ್ತದೆ. ಪುಲಿಕೇಶಿಯು ಕದಂಬರನ್ನು ಸೋಲಿಸಿ ಬನವಾಸಿಯನ್ನು ಕಿತ್ತುಕೊಂಡನು. ಗಂಗ ಮತ್ತು ಆಳುಪ ವಂಶದ ರಾಜರು ಇವನಿಗೆ ಹೆದರಿದರು. ಕೊಂಕಣದ ಮೌರ್ಯರು ಸೋತರು. ಪುರೀ ನಗರವನ್ನು ಇವನು ವಶಪಡಿಸಿಕೊಂಡನು. ಉತ್ತರಾಪಥದ ಹರ್ಷ ರಾಜನು ಯುದ್ಧದಲ್ಲಿ ಸೋತು

ಭಯದಿಂದ ಹರ್ಷ (ಸಂತೋಷ)ವನ್ನು ಕಳೆದುಕೊಂಡನು. ಪಲ್ಲವರು, ಚೋಳರು ಪುಲಿಕೇಶಿಗೆ ಹೆದರಿ ಓಡಿಹೋದರು. ಇಷ್ಟೆಲ್ಲ ದಿಗ್ವಿಜಯಗಳನ್ನು ಕೈಕೊಂಡ ಪುಲಿಕೇಶಿಯು ದೇವರನ್ನು ಪೂಜಿಸಿ ವಾತಾಪಿ ನಗರವನ್ನು ಪ್ರವೇಶಿಸಿ ಪ್ರಜೆಗಳನ್ನು ಕಾಪಾಡುತ್ತಿದ್ದನು.* ಈ ರೀತಿ ಸುಲಲಿತವಾದ ಸಂಸ್ಕೃತ ಭಾಷೆಯಲ್ಲಿ ರವಿಕೀರ್ತಿಯು ಈ ಶಾಸನವನ್ನು ರಚಿಸಿದ್ದಾನೆ. ರವಿಕೀರ್ತಿಯು ತನ್ನನ್ನು ಕಾಳಿದಾಸ, ಭಾರವಿ ಮೊದಲಾದ ಖ್ಯಾತ ಕವಿಗಳ ಸಾಲಿಗೆ ಸೇರಿಸಿಕೊಳ್ಳುತ್ತಾನೆ. ಇದರಿಂದ ಕಾಳಿದಾಸನು ರವಿಕೀರ್ತಿಗಿಂತ ಹಿಂದಿನವನು ಎಂಬ ಅಂಶವೂ ಹೊರಬೀಳುತ್ತದೆ. ಈ ಎಲ್ಲ ದೃಷ್ಟಿಗಳಿಂದಲೂ ಇದೊಂದು ಮಹತ್ತರ ಶಾಸನ.

## ಕಪ್ಪೆ ಅರಭಟ್ಟ

ಕಪ್ಪೆ ಅರಭಟ್ಟನೆಂಬುವನು ಸುಮಾರು ಕ್ರಿ. ಶ. ಏಳನೆಯ ಶತಮಾನದಲ್ಲಿ ಜೀವಿಸಿದ್ದ ಮಹಾವ್ಯಕ್ತಿ. ಈತನ ವಿಚಾರವಾಗಿ ನಮಗೆ ಹೆಚ್ಚಿಗೆ ಏನೂ ತಿಳಿಯದು. ಆದರೆ ಇವನು ಉದಾತ್ತ ಗುಣಗಳ ಸಾತ್ವಿಕ ಮಹಾಶಯನಾಗಿದ್ದನೆಂದು ಬಾದಾಮಿಯಲ್ಲಿ ದೊರಕಿರುವ ಶಾಸನವೊಂದರಿಂದ ತಿಳಿದುಬರುತ್ತದೆ. ಮನುಷ್ಯನಿಗೆ ಮಾನವೇ ಅತಿ ಮುಖ್ಯವಾದುದು. ಅದು ಪ್ರಾಣದಷ್ಟೇ ಮುಖ್ಯವಾದುದು ಎಂಬುದನ್ನು ಈ ಶಾಸನ ಬಹು ರಮ್ಯವಾಗಿ ವರ್ಣಿಸುತ್ತದೆ. ಈ ಶಾಸನವು ಬಹು ಸುಂದರವಾಗಿರುವುದರಿಂದ ಇದರ ಕೆಲವು ಭಾಗಗಳನ್ನು ಹಾಗೆಯೇ ನೋಡಬಹುದು :

ಕಪ್ಪೆ ಅರಭಟ್ಟನ್ ಶಿಷ್ಟಜನಪ್ರಿಯನ್ ।
ಕಷ್ಟಜನವರ್ಜಿತನ್ ಕಲಿಯುಗವಿಪರೀತನ್ ॥

ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್
ಮಾಧವನೀತನ್ ಪೆರನಲ್ಲ ॥

ಹೀಗೆ ಕಪ್ಪೆ ಅರಭಟ್ಟನನ್ನು ಶಾಸನಕಾರ ವರ್ಣಿಸುತ್ತಾನೆ. ಕನ್ನಡದ ಜನಗಳು ಮತ್ತು ರಾಜರು ದುಷ್ಟನಿಗ್ರಹ ಮತ್ತು ಶಿಷ್ಟ ರಕ್ಷಣವನ್ನು ತಮ್ಮ ಧರ್ಮಕಾರ್ಯವೆಂದು ತಿಳಿದಿದ್ದರು ಎಂಬುದನ್ನು ಈ ಶಾಸನದ ಒಬ್ಬ ವ್ಯಕ್ತಿಯು ತೋರಿಸಿದ್ದಾನೆ. ಶಾಸನವು ಒಬ್ಬ ವ್ಯಕ್ತಿಯನ್ನು ಕುರಿತದ್ದು ಆದರೂ, ಆ ಕಾಲದ ಕನ್ನಡಿಗರ ಜೀವನಕ್ಕೆ ಇದು ಕನ್ನಡಿಯಂತಿದೆ. ಅಷ್ಟೇ ಅಲ್ಲದೆ ಈ ಶಾಸನವು ಸಾಹಿತ್ಯದ ದೃಷ್ಟಿಯಿಂದಲೂ ಮಹತ್ವವನ್ನು ಪಡೆದಿದೆ. ಕನ್ನಡದಲ್ಲಿ ತ್ರಿಪದಿ ಅಂದರೆ ಮೂರು ಪಾದಗಳನ್ನುಳ್ಳ ಛಂದಸ್ಸಿದೆ. ಇದುವರೆವಿಗೂ ನಮಗೆ ದೊರಕಿರುವ ತ್ರಿಪದಿಗಳಲ್ಲಿ ಈ ಶಾಸನವೇ ಅತ್ಯಂತ ಪ್ರಾಚೀನವಾದುದು.

## ಲಕ್ಷ್ಮೀಧರಾಮಾತ್ಯ

ವಿಜಯನಗರದ ರಾಜ ಪ್ರೌಢಪ್ರತಾಪದೇವರಾಯನ ಕಾಲದ ಹಂಪಿಯಲ್ಲಿರುವ ಶಾಸನವೊಂದನ್ನು ಗಮನಿಸೋಣ. ಪ್ರತಾಪದೇವರಾಯನಿಗೆ ಲಕ್ಷ್ಮೀಧರಾಮಾತ್ಯನೆಂಬ ಮಂತ್ರಿಯಿದ್ದನು. ಅವನು ಮಹಾಗಣಪತಿಯನ್ನು ಸ್ಥಾಪಿಸಿ ಅದಕ್ಕಾಗಿ ಅನೇಕ ದಾನಗಳನ್ನು ಮಾಡಿದನೆಂಬುದು ಈ ಶಾಸನದಲ್ಲಿ ಹೇಳಿದೆ. ಈ ಶಾಸನದಲ್ಲಿ ಲಕ್ಷ್ಮೀಧರನ ವರ್ಣನೆಯೂ ಕಾಣಬರುತ್ತದೆ. ಇವನು ಇನ್ನೂ ಮಗುವಾಗಿದ್ದಾಗ ಇವನ ತಾಯಿ ಹಾಲೆರೆಯುತ್ತ ಅದರೊಂದಿಗೆ ಬುದ್ಧಿವಾದವನ್ನೂ ಹೇಳುತ್ತಿದ್ದಳಂತೆ. ಮಗು

ವಾಗಿದ್ದ ಕಾಲದಿಂದಲೇ ಇವನಿಗೆ ಒಳ್ಳೆಯ ಗುಣಗಳು ಯಾವ ರೀತಿ ರಕ್ತಗತವಾಗಿ ಬಂದಿದ್ದವು ವೆನ್ನುವುದು ಬಲು ಸುಂದರವಾಗಿ ವರ್ಣಿತವಾಗಿದೆ. ಈ ಪದ್ಯ ಹೀಗಿದೆ :

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ ।
ರ್ಗೆರೆವಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲಮಂ ಪಿಂತೆ ತಾ
ಯೆರೆದಳ್ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಅಂದರೆ ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಸ್ಥಾನಗಳನ್ನು ಕಟ್ಟಿಸು, ಬಂಧನಕ್ಕೊಳಗಾದ ಅನಾಥರನ್ನು ಬಿಡಿಸು, ಸ್ನೇಹಿತರಿಗೆ ಸಹಾಯವಾಗು, ನಂಬಿದವರಿಗೆ ಆಶ್ರಯ ನೀಡು, ಒಳ್ಳೆಯವರನ್ನು ಕಾಪಾಡು—ಎಂಬುದಾಗಿ ಕಿವಿಯಲ್ಲಿ ಹೇಳುತ್ತಾ ಲಕ್ಷ್ಮೀಧರನ ತಾಯಿಯು ಅವನು ಮಗುವಾಗಿದ್ದಾಗ ಹಾಲೆರೆದಳೆಂದು ಕವಿಯು ಬಲು ಚೆನ್ನಾಗಿ ವರ್ಣಿಸಿದ್ದಾನೆ. ನಿಜವಾಗಿಯೂ ಎಷ್ಟೊಂದು ಸುಂದರವಾದ ಕಲ್ಪನೆ. ಕನ್ನಡ ನಾಡಿನ ತಾಯಂದಿರು ತಮ್ಮ ಮಕ್ಕಳು ಸತ್ಪ್ರಜೆಗಳಾಗಲಿ ಎಂಬ ಆಶಯದಿಂದ ನಮ್ಮ ಸಂಸ್ಕೃತಿಯ ಮೂಲ ತತ್ತ್ವಗಳನ್ನು ಮಕ್ಕಳಿಗೆ ಹೇಳಿ ಕೊಡುತ್ತಿದ್ದರೆಂಬುದಕ್ಕೆ ಈ ಶಾಸನ ಸಾಕ್ಷಿ. ಮಕ್ಕಳೂ ಕೂಡ ತಮ್ಮ ತಾಯಿಯು ಕಲಿಸಿಕೊಟ್ಟ ಈ ತತ್ತ್ವಗಳನ್ನು ಯಾವ ರೀತಿ ಪಾಲಿಸಿ ಒಳ್ಳೆಯ ಪ್ರಜೆಗಳಾಗುತ್ತಿದ್ದರೆಂಬುದಕ್ಕೆ ಲಕ್ಷ್ಮೀಧರಾಮಾತ್ಯನ ಜೀವನವೇ ಸಾಕ್ಷಿ.

## ಧರ್ಮಸಮನ್ವಯ

ವಿಜಯನಗರದ ಕಾಲದ ಇನ್ನೊಂದು ಶಾಸನವು ಧರ್ಮಸಮನ್ವಯತೆಯ ವಿಷಯದಲ್ಲಿ ಮುಖ್ಯವಾದುದಾಗಿದೆ.

ಈ ಶಾಸನವು ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿ ಕಲ್ಲಿನ ಮೇಲೆ ಕೆತ್ತಲ್ಪಟ್ಟಿದೆ. ವಿಜಯನಗರದ ದೊರೆ ವೀರ ಬುಕ್ಕರಾಯನ ಕಾಲದಲ್ಲಿ ಜೈನರಿಗೂ ವೈಷ್ಣವರಿಗೂ ಜಗಳ ವುಂಟಾಯಿತು. ಇದರಿಂದ ಜನಗಳಲ್ಲಿ ಅಶಾಂತಿಯುಂಟಾಗಿ ತೊಂದರೆಯಾಯಿತು. ಆಗ ಬುಕ್ಕರಾಯನು ಈ ಎರಡೂ ಧರ್ಮ ಗಳ ಮುಖಂಡರನ್ನು ಬರಹೇಳಿ ಎಲ್ಲ ಪ್ರಮುಖರ ಸಮ್ಮುಖದಲ್ಲಿ ಈ ಜಗಳವನ್ನು ಬಿಡಿಸಿದನು. 'ವೈಷ್ಣವರೂ ಜೈನರೂ ಒಂದು; ಭೇದವಾಗಿ ಕಾಣಲಾಗದು' ಎಂದು ಹೇಳಿ ಇಬ್ಬರನ್ನೂ ಸಮಾಧಾನಮಾಡಿ, ಆ ಎರಡು ಪಂಗಡಗಳ ಮುಖಂಡರನ್ನು ಕೈ ಕೈ ಹಿಡಿಸಿ ಸ್ನೇಹವನ್ನುಂಟು ಮಾಡಿದನು. ನಿಜವಾಗಿಯೂ ಎಂತಹ ಆದರ್ಶ. ಇದನ್ನು ಗದ್ಯರೂಪದಲ್ಲಿ ಈ ಶಾಸನ ವರ್ಣಿ ಸುತ್ತದೆ.

ಇದೇ ರೀತಿಯ ಇನ್ನೊಂದು ಶಾಸನವು ಹೊಯ್ಸಳರ ಕಾಲಕ್ಕೆ ಸೇರಿದುದು. ಬೇಲೂರಿನ ಶಾಸನದಲ್ಲಿ ಎಲ್ಲ ದೇವರೂ ಒಬ್ಬನೇ. ಅವನನ್ನು ವಿವಿಧವಾದ ಹೆಸರುಗಳಿಂದ ಪೂಜಿಸುತ್ತಾರೆ ಎಂಬ ತತ್ತ್ವವನ್ನು ಕವಿಯು ಸುಂದರವಾಗಿ ಈ ಮಾತುಗಳಲ್ಲಿ ಹೇಳುತ್ತಾನೆ. ಇದು ಬಹು ಉದಾತ್ತವಾದ ಶ್ಲೋಕವಾಧುದರಿಂದ ಮಕ್ಕಳು ಬಾಯಿಪಾಠ ಮಾಡಲು ಬಲು ಯೋಗ್ಯವಾಗಿದೆ.

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ ॥
ಅರ್ಹನ್ನಿತ್ಯಥ ಜೈನಶಾಸನ ರತಾಃ ಕರ್ಮೇತಿ ಮೀಮಾಂಸಕಾಃ ।
ಸೋಯಂವೋವಿದಧಾತು ವಾಂಛಿತ ಫಲಂ ಶ್ರೀ ಕೇಶವಸ್ಸದಾ ॥

ಕರ್ನಾಟಕವು ಎಲ್ಲ ಧರ್ಮಗಳ ಬೀಡು. ಎಲ್ಲ ಧರ್ಮ ಗಳಿಗೂ, ಮತಗಳಿಗೂ ಸಮಾನ ಗೌರವವಿತ್ತು. ಈ ರೀತಿ

ತಿಳಿಯುವ, ಭಾವಿಸುವ ಮತ್ತು ಆದರಂತೆ ನಡೆಯುವ ಸುಸ್ಕೃತಿ ಕನ್ನಡ ನಾಡಿನ ಜನಗಳದ್ದು ಎಂಬುದನ್ನು ಮನೋಹರವಾಗಿ ಲಲಿತವಾಗಿ ಈ ಮೇಲಿನ ಶ್ಲೋಕ ತಿಳಿಸುತ್ತದೆ. ಇದರ ತಾತ್ಪರ್ಯ ಇಷ್ಟೆ : ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ಕರ್ತನೆಂದು ನೈಯ್ಯಾಯಿಕರೂ, ಅರ್ಹನ್ ಎಂದು ಜೈನರೂ, ಕರ್ಮ ಎಂದು ಮೀಮಾಂಸಕರೂ ಮುಂತಾಗಿ ಹೇಳುವ ಆ ಕೇಶವನು ನಮ್ಮ ಇಷ್ಟಾರ್ಥಗಳನ್ನು ಪೂರೈಸಲಿ. ವೇದಗಳಿಂದ ಹಿಡಿದು ಮಹಾತ್ಮಾ ಗಾಂಧಿಯವರೆಗೂ ಹೇಳಿದ ಈ ಅಭಿಪ್ರಾಯವನ್ನು ಸುಂದರವಾಗಿಯೂ ಎಲ್ಲರಿಗೂ ತಿಳಿಯುವಂತೆ ಹೇಳಿದ ಕೀರ್ತಿ ಬೇಲೂರು ಶಾಸನಕಾರನಿಗೆ ಸೇರುತ್ತದೆ. ಈ ರೀತಿ ಧರ್ಮಸಮನ್ವಯ, ಸಮಾನತೆಯನ್ನು ತಿಳಿಸುವ ಶಾಸನಗಳು ಕನ್ನಡ ನಾಡಿನಲ್ಲಿ ನೂರಾರಿವೆ.

## ವಿದ್ಯಾದಾನಶಾಸನ

ಕನ್ನಡ ನಾಡಿನ ರಾಜರು ಮತ್ತು ಶ್ರೀಮಂತರು ವಿದ್ಯಾ ಪಕ್ಷಪಾತಿಗಳಾಗಿದ್ದರೆಂದು ಆಗಲೇ ಹೇಳಿದ್ದೇವೆ. ದೇವಾಲಯಗಳನ್ನು ಕಟ್ಟಿಸುವುದು ಎಷ್ಟು ಮುಖ್ಯವೋ, ವಿದ್ಯಾ ಕೇಂದ್ರಗಳನ್ನು ಸ್ಥಾಪಿಸುವುದೂ ಅಷ್ಟೇ ಮುಖ್ಯವೆಂದು ಪ್ರಾಚೀನ ಕನ್ನಡಿಗರು ಭಾವಿಸಿದ್ದರು. ಆದುದರಿಂದ ಕನ್ನಡ ನಾಡಿನಲ್ಲಿ ನೂರಾರು ಮಠಗಳು, ಬ್ರಹ್ಮಪುರಿಗಳು, ಅಗ್ರಹಾರಗಳು ಮತ್ತು ಘಟಿಕಾಸ್ಥಾನಗಳು ಬೆಳೆದು ಬಂದವು. ಗುಲ್ಬರ್ಗ ಜಿಲ್ಲೆಯ ನಾಗಾವಿ ಎಂಬಲ್ಲಿ ಚಾಲುಕ್ಯ ಚಕ್ರವರ್ತಿ ಆಹವಮಲ್ಲನ ಕ್ರಿ. ಶ. ೧೦೫೮ರ ಶಾಸನ ವೊಂದರಲ್ಲಿ, ಅಲ್ಲಿದ್ದ ವಿದ್ಯಾಕೇಂದ್ರಗಳ ವಿಷಯವು ಪ್ರಸ್ತಾ

ಪಿತವಾಗಿದೆ. ಇದೊಂದು ದೊಡ್ಡ ಅಗ್ರಹಾರವಾಗಿದ್ದಿತು. ಅಂದರೆ ವಿದ್ವಾಂಸರು ವಾಸಮಾಡುವ ಸ್ಥಳವಾಗಿದ್ದಿತು. ಅಲ್ಲಿ ಒಂದು ಘಟಿಕಾಸ್ಥಾನವೂ ಇದ್ದಿತು. ಇದು ಪ್ರಸಿದ್ಧವಾಗಿದ್ದ ಸಂಸ್ಥೆಯಾಗಿದ್ದಿತು. ಇದರಲ್ಲಿ ಇನ್ನೂರು ವೇದವನ್ನೋದುವ ವಿದ್ಯಾರ್ಥಿಗಳೂ, ಐವತ್ತು ಮಂದಿ ಇತರ ಶಾಸ್ತ್ರಗಳನ್ನೋದುವ ವಿದ್ಯಾರ್ಥಿಗಳೂ ಇದ್ದರು. ಇವರುಗಳ ಉಪಯೋಗಕ್ಕಾಗಿ ಸರಸ್ವತೀ ಭಂಡಾರವೆಂಬ ಪುಸ್ತಕ ಭಂಡಾರವೂ ಇದ್ದಿತು. ಇಲ್ಲಿ ಒಂಬತ್ತು ಜನ ಉಪಾಧ್ಯಾಯರುಗಳು ಪಾಠಗಳನ್ನು ಕಲಿಸುತ್ತಿದ್ದರು. ಪುಸ್ತಕ ಭಂಡಾರವನ್ನು ನೋಡಿಕೊಳ್ಳಲು ಆರು ಜನ ಭಂಡಾರಿಗಳು (ಲೈಬ್ರೇರಿಯನ್) ಇದ್ದರು. ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯಗಳಿದ್ದವು. ಉಪಾಧ್ಯಾಯರಿಗೆ ವಾಸಕ್ಕೆ ಮನೆಗಳಿದ್ದವು. ಇವುಗಳೆಲ್ಲವನ್ನೂ ದುಡ್ಡಿಲ್ಲದೆ ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಒದಗಿಸಲಾಗಿದ್ದಿತು. ಈ ಎಲ್ಲ ಕೆಲಸಗಳಿಗಾಗಿ ಕಾಳಿದಾಸ ದಂಡಾಧಿಪನೆಂಬ ಮಂತ್ರಿಯು ಸಾಕಷ್ಟು ದಾನಗಳನ್ನು ಬಿಟ್ಟುಕೊಟ್ಟು, ಈ ಸಂಸ್ಥೆಯು ವ್ಯವಸ್ಥಿತ ರೀತಿಯಲ್ಲಿ ನಡೆಯುವಂತೆ ಏರ್ಪಾಡು ಮಾಡಿದ್ದನು.

ಬಿಜಾಪುರ ಜಿಲ್ಲೆಯ ಸಾಲೊಟಗಿ ಎಂಬಲ್ಲಿಯೂ ಪ್ರಸಿದ್ಧವಾದ ವಿದ್ಯಾಕೇಂದ್ರವಿದ್ದಿತೆಂಬುದು ಹತ್ತನೇ ಶತಮಾನದ ಶಾಸನದಿಂದ ತಿಳಿಯುತ್ತದೆ. ಇಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳ ವಾಸಕ್ಕೆ ಇಪ್ಪತ್ತೇಳು ಉಚಿತ ವಿದ್ಯಾರ್ಥಿ ನಿಲಯಗಳಿದ್ದವು. ಬಳ್ಳಿಗಾವೆಯ ಕೇದಾರೇಶ್ವರ ಮಠವು ಕರ್ನಾಟಕದಲ್ಲಿ ಪ್ರಸಿದ್ಧವಾಗಿದ್ದ ಹನ್ನೆರಡನೆಯ ಶತಮಾನದ ವಿಶ್ವವಿದ್ಯಾನಿಲಯ. ಇದರ ವಿಷಯವು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದ ತಾಲ್ಲೂಕಿನಲ್ಲಿ ದೊರಕಿರುವ

ಶಾಸನಗಳಿಂದ ತಿಳಿದು ಬರುತ್ತದೆ. ಈ ರೀತಿ ಕನ್ನಡ ನಾಡಿನ ವಿದ್ಯಾಕೇಂದ್ರಗಳ ವಿಷಯದಲ್ಲಿ ವಿಶೇಷ ಮಾಹಿತಿಯನ್ನು ಶಾಸನಗಳು ಒದಗಿಸುತ್ತವೆ.

## ವೀರಗಲ್ಲುಗಳು

ಕನ್ನಡನಾಡು ಪ್ರಾಚೀನ ಕಾಲದಿಂದಲೂ ಶೂರರ ಮತ್ತು ಧೀರರ ನಾಡು. ಕನ್ನಡಿಗರು ತಾವಾಗಿಯೇ ಯಾರ ಮೇಲೂ ಕಾಲು ಕೆರೆದುಕೊಂಡು ಯುದ್ಧ ಮಾಡುತ್ತಿರಲಿಲ್ಲ. ಆದರೆ ತಮ್ಮನ್ನು ಕೆಣಕಿದವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ಹೋರಾಟ ನಡೆದರೆ ಅದು ಧರ್ಮಕ್ಕಾಗಿ ಮತ್ತು ಸತ್ಯಕ್ಕಾಗಿ. ಇಂತಹ ಹೋರಾಟಗಳನ್ನು ನಡೆಸುವಾಗ ಮಾತ್ರ ಶಕ್ತಿಮೀರಿ ಕಾದಾಡುತ್ತಿದ್ದರು. ಚೀನೀ ಯಾತ್ರಿಕನಾದ ಹ್ಯುಯೆನ್‌ತ್ಸಾಂಗ್ ಎಂಬುವನು ಕನ್ನಡದ ಜನಗಳನ್ನು ಹೊಗಳುತ್ತಾ ಹೀಗೆ ಹೇಳುತ್ತಾನೆ: ಇವರಿಗೆ ಅವಮಾನ ಉಂಟಾದರೆ ಸೇಡನ್ನು ತೀರಿಸಿಕೊಳ್ಳದೆ ಬಿಡುವುದಿಲ್ಲ. ಆಗ ಇವರು ತಮ್ಮ ಪ್ರಾಣವನ್ನೂ ಲೆಕ್ಕಿಸುವುದಿಲ್ಲ. ಈ ರೀತಿ ತಮ್ಮ ಪ್ರಾಣಗಳನ್ನು ಅರ್ಪಿಸಿದ ವೀರರನ್ನೂ, ಶೂರರನ್ನೂ ಮರೆತು ಬಿಡದೆ ಅವರನ್ನು ನೆನೆಸಿಕೊಳ್ಳುವ ಒಂದು ಒಳ್ಳೆಯ ಸಂಪ್ರದಾಯವು ಕರ್ನಾಟಕದಲ್ಲಿದ್ದಿತು. ಸತ್ತ ವೀರನ ಜ್ಞಾಪಕಾರ್ಥವಾಗಿ ನೆಡಿಸಿದ ಶಾಸನಗಳೇ ವೀರಗಲ್ಲುಗಳು. ಇವು ಕರ್ನಾಟಕದ ವೈಶಿಷ್ಟ್ಯಗಳಲ್ಲೊಂದು. ಸಾವಿರಾರು ಸಂಖ್ಯೆಯಲ್ಲಿ ವೀರಗಲ್ಲುಗಳು ಕರ್ನಾಟಕದಲ್ಲಿ ದೊರೆತಿರುವುದರಿಂದ ಕರ್ನಾಟಕದಲ್ಲಿ ವೀರರ, ಶೂರರ ಸಂಖ್ಯೆ ಹೆಚ್ಚಾಗಿದ್ದಿತು ಎಂಬುದು ವ್ಯಕ್ತವಾಗುತ್ತದೆ.

ವೀರನೊಬ್ಬನು ಯುದ್ಧದಲ್ಲಿಯೋ, ತನ್ನ ಗ್ರಾಮ



ವೀರಗಲ್ಲು
(ಚಿತ್ರ: ಮೈಸೂರು ವಿಶ್ವವಿದ್ಯಾನಿಲಯದ ಪುರಾತತ್ತ್ವ ಸಂಗ್ರಹಾಲಯದ ಕೃಪೆಯಿಂದ)

ವನ್ನು ಕಾಪಾಡುವ ಸಲುವಾಗಿಯೋ ಇಲ್ಲವಾದರೆ ಅನ್ಯಾವುದಾದರೂ ಧಾರ್ಮಿಕ ಕಾರ್ಯವನ್ನು ಮಾಡುವಲ್ಲಿ ತನ್ನ ಪ್ರಾಣವನ್ನು ಅರ್ಪಿಸಿದರೆ ಆ ಗ್ರಾಮದ, ಆ ಜಿಲ್ಲೆಯ ಇಲ್ಲವೇ ರಾಜ್ಯದ ಅಧಿಕಾರಿಗಳು ಅವನ ಸ್ಮಾರಕವಾಗಿ ಕಲ್ಲುಗಳನ್ನು ಕೆತ್ತಿಸಿ ನಿಲ್ಲಿಸುತ್ತಿದ್ದರು. ಸಾಮಾನ್ಯವಾಗಿ ವೀರಗಲ್ಲುಗಳಲ್ಲಿ ಮೂರು ಅಂತಸ್ತುಗಳ ಚಿತ್ರಗಳಿರುತ್ತವೆ. ಮೊದಲನೆಯ ಅಂತಸ್ತಿನಲ್ಲಿ ವೀರನು ಹೋರಾಟದಲ್ಲಿ ನಿರತನಾಗಿರುವುದು ಚಿತ್ರಿತವಾಗಿರುತ್ತದೆ. ಎರಡನೆಯ ಅಂತಸ್ತಿನಲ್ಲಿ ವೀರನು ತನ್ನ ಪ್ರಾಣವನ್ನು ಕಳೆದುಕೊಂಡ ನಂತರ ದೇವಲೋಕದ ಕನ್ಯೆಯರು ಅವನನ್ನು ಪಲ್ಲಕ್ಕಿಯಲ್ಲಿ ಕೈಲಾಸಕ್ಕೆ ಕೊಂಡೊಯ್ಯುತ್ತಿರುವುದು ಚಿತ್ರಿತವಾಗಿರುತ್ತದೆ. ಮೇಲಿನ ಮೂರನೆಯ ಅಂತಸ್ತಿನಲ್ಲಿ ಅವನು ಕೈಲಾಸದಲ್ಲಿ ಶಿವನ ಸಾನ್ನಿಧ್ಯವನ್ನು ಪಡೆದಿರುವುದು ಚಿತ್ರಿತವಾಗಿರುತ್ತದೆ. ಇದರ ಕೆಳಭಾಗದಲ್ಲಿ ಮತ್ತು ಎರಡು ಅಂತಸ್ತುಗಳ ಮಧ್ಯಭಾಗದಲ್ಲಿರುವ ಸ್ಥಳದಲ್ಲೆಲ್ಲ ಶಾಸನವು ಕೆತ್ತಲ್ಪಟ್ಟಿರುತ್ತವೆ. ಸಾಮಾನ್ಯವಾಗಿ ವೀರಗಲ್ಲುಗಳು ಗದ್ಯ ರೂಪವಾಗಿಯೇ ಇರುತ್ತವೆ. ರಾಜನ ಹೆಸರು ಮುಂತಾದ ವಿವರಗಳನ್ನು ಹೇಳಿದ ನಂತರ ವೀರನು ಯುದ್ಧದಲ್ಲಿ ಕಾದಾಡಿದ ವರ್ಣನೆಯು ಬರುತ್ತದೆ. ಸಾಮಾನ್ಯವಾಗಿ ಇವುಗಳಲ್ಲಿ ಕಾಲವೂ ನಿರ್ದೇಶಿತವಾಗಿರುತ್ತದೆ. ಕೊನೆಗೆ ವೀರಗಲ್ಲುಗಳು ಈ ಕೆಳಗಿನ ಶ್ಲೋಕದಿಂದ ಮುಗಿಯುತ್ತವೆ.

ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ ।
ಕ್ಷಣವಿಧ್ವಂಸಿನೀ ಕಾಯಾ ಕಾ ಚಿಂತಾ ಮರಣೇ ರಣೇ ॥

ಗೆದ್ದರೆ ಲಕ್ಷ್ಮೀ ದೊರೆಯುತ್ತಾಳೆ. ಸತ್ತರೆ ಸ್ವರ್ಗಲೋಕದ ಸುಂದರಿಯರು ಸಿಕ್ಕುತ್ತಾರೆ. ಕ್ಷಣಮಾತ್ರದಲ್ಲಿ ನಾಶವಾಗುವ

ಈ ಶರೀರಕ್ಕೆ ಯುದ್ಧದಲ್ಲಿ ಸಾಯುತ್ತೇನೆಂಬ ಚಿಂತೆ ಏಕೆ ? ಎಂದು ಇದರ ತಾತ್ಪರ್ಯ. ಬೇಗೂರು, ಮಾವಳಿ, ಬರ್ದವಳ್ಳಿ, ಹಿರೆಗುಂಡನಕಲ್ಲು, ಹರಿಹರ, ಆಲೂರು ಮುಂತಾದ ಸ್ಥಳಗಳಲ್ಲಿ ಸುಂದರವಾದ ವೀರಗಲ್ಲುಗಳು ದೊರಕಿವೆ.

## ಆತಕೂರು ಶಾಸನ

ಪ್ರೀತಿಸುತ್ತಿದ್ದ ನಾಯಿಯ ಸ್ಮಾರಕವಾಗಿ ಒಂದು ವೀರ ಗಲ್ಲನ್ನು ಸ್ಥಾಪಿಸಿದ ಒಂದು ಅಪೂರ್ವ ಶಾಸನವು ಮಂಡ್ಯ ಜಿಲ್ಲೆಯ ಆತಕೂರು ಎಂಬಲ್ಲಿದೆ. ರಾಷ್ಟ್ರಕೂಟರಿಗೂ - ಚೋಳ ರಿಗೂ ನಡೆದ ಹೋರಾಟದಲ್ಲಿ ಬೂತುಗನ ಸೇನಾಧಿಕಾರಿಯಾದ ಮಣಲೇರನೆಂಬುವನು ಬಹಳ ಶೌರ್ಯದಿಂದ ಕಾದಾಡುತ್ತಾನೆ. ಇದನ್ನು ಮೆಚ್ಚಿಕೊಂಡ ಬೂತುಗನು ನಿನಗೇನು ಬೇಕು ಎಂದು ಕೇಳಿದಾಗ ಮಣಲೇರನು ಬೂತುಗನ ಹತ್ತಿರವಿದ್ದ ಕಾಳಿ ಎಂಬ ನಾಯಿಯನ್ನು ಬೇಡಿ ಪಡೆಯುತ್ತಾನೆ. ಕಾಲಕ್ರಮದಲ್ಲಿ ಮಣಲೇ ರನು ಬೇಟೆಯಾಡುತ್ತಿದ್ದಾಗ ಈ ನಾಯಿಯು ಹಂದಿಯೊಡನೆ ಕಾದಾಡಿ ಅದನ್ನು ಕೊಂದು ತಾನೂ ಸಾಯುತ್ತದೆ. ಆ ನಾಯಿಯ ಜ್ಞಾಪಕಾರ್ಥವಾಗಿ ಮಣಲೇರನು ಒಂದು ವೀರಗಲ್ಲನ್ನು ನೆಡಿಸು ತ್ತಾನೆ. ಅಷ್ಟೇ ಅಲ್ಲದೆ ಈ ವೀರಗಲ್ಲನ್ನು ಪ್ರತಿನಿತ್ಯವೂ ಪೂಜಿಸು ವುದಕ್ಕಾಗಿ ಒಬ್ಬ ಗೊರವನನ್ನು ನಿಯಮಿಸಿ, ಆ ಗೊರವನಿಗೆ ಒಂದು ಹೊಲವನ್ನು ದಾನಮಾಡುತ್ತಾನೆ. ಆ ವೀರಗಲ್ಲಿಗೆ ಪೂಜೆ ಮಾಡದೆ ಊಟ ಮಾಡಿದರೆ ನಾಯಿಯನ್ನು ಕೊಂದ ಪಾಪವು ಅಂಟಿಕೊಳ್ಳುತ್ತದೆ ಎಂದೂ ಬರೆದಿದ್ದಾನೆ. ಈ ಶಾಸನದಲ್ಲಿ ನಾಯಿಯು ಹಂದಿಯೊಡನೆ ಹೋರಾಡುತ್ತಿರುವುದು ಚಿತ್ರಿತ ವಾಗಿದೆ. ಸುತ್ತಲೂ ಶಾಸನವಿದೆ. ಒಟ್ಟಿನಲ್ಲಿ ಇದೊಂದು ಅಪೂರ್ವ ಶಾಸನ.

## ಮಾಸ್ತಿ ಕಲ್ಲು

ಪತಿಯ ಮರಣಾನಂತರ ಪತ್ನಿಯು ದುಃಖವನ್ನು ಮತ್ತು ತನ್ನ ಪತಿಯ ಅಗಲುವಿಕೆಯನ್ನೂ ಸಹಿಸಲಾರದೆ ತನ್ನ ಸ್ವಂತ ಸಂತೋಷದಿಂದ ಗಂಡನ ಚಿತೆಯಲ್ಲಿಯೇ ಅಗ್ನಿ ಪ್ರವೇಶ ಮಾಡಿ ಮಹಾಸತಿಯಾಗುವ ಪದ್ಧತಿಯು ಕರ್ನಾಟಕದಲ್ಲಿ ರೂಢಿಯಲ್ಲಿತ್ತು. ಈ ರೀತಿ ಪ್ರಾಣತ್ಯಾಗ ಮಾಡಿದ ಸತಿಯರ ಜ್ಞಾಪಕಾರ್ಥವಾಗಿ ನಿಲ್ಲಿಸಿರುವ ಕಲ್ಲುಗಳೇ ಮಹಾಸತಿ ಕಲ್ಲುಗಳು ಅಥವಾ ಮಾಸ್ತಿ ಕಲ್ಲುಗಳು. ಕನ್ನಡ ನಾಡಿನ ವೀರ ವನಿತೆಯರು ಈ ರೀತಿ ಪ್ರಾಣತ್ಯಾಗ ಮಾಡಿ ತಮ್ಮ ಗಂಡಂದಿರ ಮೇಲೆ ತಾವು ಇಟ್ಟಿದ್ದ ಪ್ರೀತಿ, ವಿಶ್ವಾಸಗಳನ್ನು ವ್ಯಕ್ತಪಡಿಸಿದ್ದಾರೆ. ಆದುರಿಂದ ಕರ್ನಾಟಕದಲ್ಲಿ ಮಾಸ್ತಿ ಕಲ್ಲುಗಳೂ ವಿಶೇಷವಾಗಿ ದೊರೆಯುತ್ತವೆ. ಸಾಮಾನ್ಯವಾಗಿ ಮಾಸ್ತಿ ಕಲ್ಲಿನಲ್ಲಿ ಬರಹಗಳು ಕಡಿಮೆ. ಅವುಗಳಲ್ಲಿ ಎತ್ತಿದ ತೋಳಿನ ಚಿತ್ರವಿರುತ್ತದೆ. ಕೆಲವು ಸಮಯದಲ್ಲಿ ಸ್ತ್ರೀಯ ಪೂರ್ಣ ಚಿತ್ರವೂ, ತಲೆಯ ಮೇಲೆ ಬೆಂಕಿಯ ಜ್ವಾಲೆಯೂ ಕಾಣುವುದು. ಮತ್ತೆ ಕೆಲವು ಕಡೆ ಎರಡು ತೋಳುಗಳು ಚಿತ್ರಿತವಾಗಿರುವುದೂ ಉಂಟು. ಅಂಕನಹಳ್ಳಿ, ಹೊಸಕೋಟೆ ಮುಂತಾದ ಕಡೆಗಳಲ್ಲಿ ಸುಂದರವಾದ ಮಾಸ್ತಿ ಕಲ್ಲುಗಳಿವೆ.

## ನಿಸಿದಿ ಕಲ್ಲುಗಳು

ಮತಾಚರಣೆಯಂತೆ ಆಹಾರವನ್ನು ಸೇವಿಸದೆ ದೇಹತ್ಯಾಗ ಮಾಡುವ ಪದ್ಧತಿ ಜೈನರಲ್ಲಿ ವಿಶೇಷವಾಗಿದ್ದಿತು. ಈ ರೀತಿ ವ್ರತದಿಂದ ಮರಣ ಹೊಂದಿದವರ ಜ್ಞಾಪಕಾರ್ಥವಾಗಿ ನಿಲ್ಲಿಸುತ್ತಿದ್ದ ಕಲ್ಲುಗಳಿಗೆ ನಿಸಿದಿ ಕಲ್ಲುಗಳೆಂದು ಹೆಸರು.

ಸಾಮಾನ್ಯವಾಗಿ ನಿಸಿದಿಕಲ್ಲುಗಳು ಜೈನ ಬಸದಿಗಳ ಮುಂದೆ ಕಾಣ ಬರುತ್ತವೆ. ಶ್ರವಣಬೆಳಗೊಳದಲ್ಲಿ ಈ ರೀತಿಯ ಸ್ಮಾರಕಗಳು. ಇವೆ. ಇವುಗಳಲ್ಲಿ ಎರಡಂತಸ್ತಿನ ಇಲ್ಲವೇ ಮೂರಂತಸ್ತಿನ ಚಿತ್ರ ಗಳು ಇರುತ್ತವೆ. ಅವುಗಳಲ್ಲಿ ಜಿನ ಗುರುವಿನ ಮುಂದೆ ಈ ವ್ರತ ವನ್ನು ಕೈಗೊಂಡಿರುವವನ ಚಿತ್ರ ಮುಂತಾದವು ಕಾಣಬರುತ್ತವೆ. ನಿಸಿದಿಕಲ್ಲಿನಲ್ಲಿ ವೀರಗಲ್ಲಿನಂತೆ ಸತ್ತವರನ್ನು ವಿಮಾನದಲ್ಲಿ ಜಿನನ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವೂ, ಕೊನೆಯ ಹಂತದಲ್ಲಿ ಅವರು ಜಿನ ಸಾನ್ನಿಧ್ಯವನ್ನು ಪಡೆದಿರುವುದೂ ಚಿತ್ರಿತ ವಾಗಿರುವುದು ಕಾಣುತ್ತದೆ.

## ಅರ್ಜುನವಾಡ ಶಾಸನ

ಶಾಸನಗಳು ಅನೇಕ ವೇಳೆ ಮಹಾವ್ಯಕ್ತಿಗಳ ವಿಷಯದಲ್ಲಿ ಪ್ರಮಾಣಪೂರ್ಣವಾದ ಮಾಹಿತಿಯನ್ನು ಒದಗಿಸುತ್ತವೆ. ವೀರಶೈವ ಮತಸ್ಥಾಪಕ ಬಸವಣ್ಣನವರ ಬಗ್ಗೆ ಶಾಸನಗಳಲ್ಲಿ ಉಲ್ಲೇಖವೇ ಇರಲಿಲ್ಲ. ಆದುದರಿಂದ ಅವರ ಜೀವಿತಕಾಲ ಮುಂತಾದವುಗಳ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿರಲಿಲ್ಲ. ಇಂತಹ ಸಮಯದಲ್ಲಿ ಸೇವುಣ ರಾಜಕೃಷ್ಣನ ಕಾಲದ ಅರ್ಜುನವಾಡ ಶಾಸನವು ಬೆಳಕಿಗೆ ಬಂದಿತು. ಇದರಲ್ಲಿ ಬಸವಣ್ಣನವರ ಬಗೆಗೆ ಖಚಿತವಾದ ಉಲ್ಲೇಖವು ಕಾಣಬರುತ್ತದೆ.

## ಪಂಪನ ತಮ್ಮ ಜಿನವಲ್ಲಭನ ಶಾಸನ

ಇತ್ತೀಚೆಗೆ ಬೆಳಕಿಗೆ ಬಂದ ಶಾಸನಗಳಲ್ಲಿ ಕನ್ನಡದ ಶ್ರೇಷ್ಠಕವಿ ಪಂಪನ ತಮ್ಮ ಜಿನವಲ್ಲಭನ ಶಾಸನವು ಮುಖ್ಯ

ಪಾದುದು. ಆಂಧ್ರಪ್ರದೇಶದ ಕುರ್ನೂಲ್ ಒಂದು ಗ್ರಾಮದಲ್ಲಿ ದೊರಕಿದ ಶಾಸನವು ಇದುವರೆವಿಗೂ ನಮಗೆ ತಿಳಿಯದೇ ಇದ್ದ ಹೊಸ ಐತಿಹಾಸಿಕ ಸಂಗತಿಗಳನ್ನು ತಿಳಿಯಪಡಿಸಿತು. ಇದರಿಂದ ಪಂಪಕವಿಯ ಜೀವನದ ಬಗ್ಗೆ ಹೊಸ ಬೆಳಕು ಚೆಲ್ಲಿದಂತಾಗಿದೆ.

ಈ ರೀತಿ ಪ್ರತಿನಿತ್ಯವೂ ಬೆಳಕಿಗೆ ಬರುತ್ತಿರುವ ಶಾಸನಗಳಿಂದ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಜ್ಞಾನವು ದಿನೇ ದಿನೇ ಹೆಚ್ಚುತ್ತಿದೆ.

## ಕರ್ನಾಟಕದ ಹೊರಗೆ

ಕರ್ನಾಟಕದ ಶಾಸನಗಳು ನಮ್ಮ ರಾಜ್ಯಕ್ಕೆ ಮಾತ್ರ ಸೀಮಿತವಾಗಿಲ್ಲ. ಕನ್ನಡ ರಾಜವಂಶಗಳ ಶಾಸನಗಳು ಕರ್ನಾಟಕದ ಗಡಿಯನ್ನೂ ದಾಟಿ ಹರಡಿವೆ. ಹಿಂದಿನ ಕರ್ನಾಟಕವು ಈಗಿನ ಕರ್ನಾಟಕಕ್ಕಿಂತ ವಿಶಾಲವಾಗಿದ್ದು, ಸುತ್ತಮುತ್ತಲಿನ ಪ್ರದೇಶಗಳನ್ನು ಒಳಗೊಂಡಿದ್ದಿತು. ಸೇವುಣರ ಕಾಲದಲ್ಲಿ ಮಹಾರಾಷ್ಟ್ರದ ಅನೇಕ ಭಾಗಗಳು, ಹೊಯ್ಸಳರು ಮತ್ತು ವಿಜಯನಗರದ ಅರಸರ ಕಾಲದಲ್ಲಿ ತಮಿಳುನಾಡಿನ ಅನೇಕ ಭಾಗಗಳು, ಚಾಲುಕ್ಯರ ಕಾಲದಲ್ಲಿ ಆಂಧ್ರಪ್ರದೇಶದ ಅನೇಕ ಭಾಗಗಳು ಆಗಿನ ಕರ್ನಾಟಕಕ್ಕೆ ಸೇರಿದ್ದವೆಂಬುದನ್ನು ಮರೆಯಬಾರದು. ಅದುದರಿಂದ ಈ ದೇಶಗಳಲ್ಲೆಲ್ಲ ಕರ್ನಾಟಕದ ಶಾಸನಗಳು ಹೇರಳವಾಗಿ ದೊರಕಿವೆ.

ಇನ್ನು ಕೆಲವು ಸಮಯಗಳಲ್ಲಿ ಕರ್ನಾಟಕದ ರಾಜರು ದಂಡಯಾತ್ರೆ ಹೋದಾಗ ಹೊರದೇಶಗಳಲ್ಲಿ ತಮ್ಮ ವಿಜಯ ಯಾತ್ರೆಯ ಗುರುತಾಗಿ ಶಾಸನಗಳನ್ನು ನೆಡಿಸಿರುವುದೂ ಉಂಟು. ಇಲ್ಲವೇ ವಿಜಯಯಾತ್ರೆಯ ಮಾರ್ಗದಲ್ಲಿ ಸಿಕ್ಕಿದ

ಪುಣ್ಯಕ್ಷೇತ್ರಗಳು ಮತ್ತು ದೇವಾಲಯಗಳಿಗೆ ದತ್ತಿಗಳನ್ನು ಕೊಟ್ಟು ಶಾಸನಗಳನ್ನು ಬರೆಯಿಸಿರುವುದೂ ಉಂಟು. ಈ ರೀತಿಯ ಶಾಸನಗಳು ಹೆಚ್ಚು ಸಂಖ್ಯೆಯಲ್ಲಿಲ್ಲವಾದರೂ ಬಹಳ ಪ್ರಸಿದ್ಧ. ಗಯೆ ಮತ್ತು ಕಾಶಿಗಳಲ್ಲಿ ದೊರಕಿರುವ ಶಾಸನಗಳು ಮುಖ್ಯವಾದವು. ಮಧ್ಯಪ್ರದೇಶದ ಜುರಾ ಎಂಬಲ್ಲಿ ದೊರಕಿರುವ ರಾಷ್ಟ್ರಕೂಟ ಮೂರನೆಯ ಕೃಷ್ಣನ ಶಾಸನ ಕನ್ನಡಭಾಷೆ ಮತ್ತು ಕನ್ನಡ ಲಿಪಿಯಲ್ಲಿದೆ. ಬಿಹಾರದಲ್ಲಿರುವ ಗಯೆಯಲ್ಲಿ ಹೊಯ್ಸಳ ಮತ್ತು ವಿಜಯನಗರ ಶಾಸನಗಳು ದೊರಕಿವೆ. ಇವುಗಳು ಧರ್ಮಕ್ಕೆ ಸಂಬಂಧಪಟ್ಟ ವಿಷಯಗಳನ್ನು ತಿಳಿಸುತ್ತವೆ.

## ಇತಿಹಾಸಕ್ಕೆ ಕೊಡುಗೆ

ನಾವು ಆಗಲೇ ಗಮನಿಸಿರುವಂತೆ ಇತಿಹಾಸ ರಚನೆಗೆ ಶಾಸನಗಳೇ ಬಲು ಮುಖ್ಯ ಆಧಾರ. ಅದರಲ್ಲಿಯೂ ಕರ್ನಾಟಕದಲ್ಲಿ ವಿಜಯನಗರದ ಕಾಲದವರೆಗೆ ಶಾಸನಗಳನ್ನು ಬಿಟ್ಟರೆ, ಮುಖ್ಯವಾದ ಮತ್ತು ಇಷ್ಟೊಂದು ವಿಷಯಗಳನ್ನೊಳಗೊಂಡ ಇತಿಹಾಸ ಸಾಮಗ್ರಿಯು ದೊರಕುವುದೇ ಇಲ್ಲ. ಮುಸ್ಲಿಂ ರಾಜಮನೆತನಗಳು ಕರ್ನಾಟಕದಲ್ಲಿ ತಲೆಯೆತ್ತಿದ ಕಾಲದಿಂದ ಇತಿಹಾಸ ರಚನೆಗೆ ಮುಸ್ಲಿಂ ಚರಿತ್ರಕಾರರ ಗ್ರಂಥಗಳು ದೊರಕುತ್ತವೆ. ಅದಕ್ಕೆ ಮುಂಚೆ ನಮ್ಮದೇ ಆದ ಸಾಹಿತ್ಯ ಗ್ರಂಥಗಳು ಬಲು ಕಡಿಮೆ. ಇರುವವುಗಳೂ ಕೂಡ ವಿಶೇಷವಾಗಿ ಸಾಹಿತ್ಯಕ ದೃಷ್ಟಿಯನ್ನು ಹೊಂದಿದ್ದು, ಇತಿಹಾಸದ ರಚನೆಗೆ ಅನುಕೂಲಕರವಾಗಿಲ್ಲ. ಹಾಗಾಗಿ ಕರ್ನಾಟಕದ ಇತಿಹಾಸ ರಚನೆಗೆ ನಾವು ಮುಖ್ಯವಾಗಿ ಶಾಸನಗಳನ್ನೇ ಅವಲಂಬಿಸಬೇಕಾಗುತ್ತದೆ.

ರಾಜಕೀಯ ಇತಿಹಾಸ, ಒಬ್ಬ ರಾಜನು ಮತ್ತೊಬ್ಬ ರಾಜನ ಮೇಲೆ ಮಾಡಿದ ಯುದ್ಧಗಳು ಮುಂತಾದ ವಿಚಾರವಾಗಿ ಕರ್ನಾಟಕದ ಶಾಸನಗಳು ವಿಶೇಷ ಮಾಹಿತಿಯನ್ನು ಒದಗಿಸುತ್ತವೆ. ಸಾಮಾನ್ಯವಾಗಿ ಶಾಸನದ ಮುಖ್ಯ ಉದ್ದೇಶವೇನೇ ಆಗಿದ್ದರೂ ಅದು ದಾನಶಾಸನವೇ ಆಗಿದ್ದರೂ, ಮೊದಲ ಭಾಗದಲ್ಲಿ ಆಳುವ ರಾಜನ ಮತ್ತು ಅವನ ಹಿಂದಿನವರ ರಾಜಕೀಯ ಸಾಧನೆಗಳನ್ನು ಶಾಸನಗಳು ತಿಳಿಸುತ್ತವೆ ಎಂಬುದನ್ನು ಆಗಲೇ ಗಮನಿಸಿದ್ದೇವೆ. ಈ ಭಾಗದಿಂದ ಚರಿತ್ರಕಾರನು ರಾಜಕೀಯ ಇತಿಹಾಸವನ್ನು ರಚಿಸುತ್ತಾನೆ. ಅದೇ ರೀತಿಯಲ್ಲಿ ಆಳುತ್ತಿರುವ ರಾಜನ ರಾಜ್ಯಭಾರದ ಎಷ್ಟನೆಯ ವರ್ಷದಲ್ಲಿ ಶಾಸನವು ಹುಟ್ಟಿತು ಎಂದು ತಿಳಿಸುವುದರಿಂದ, ರಾಜನು ಪಟ್ಟಕ್ಕೆ ಬಂದ ವರ್ಷ, ಅವನು ಆಳಿದ ವರ್ಷಗಳು ಮುಂತಾದವು ಸುಲಭವಾಗಿ ತಿಳಿಯುತ್ತವೆ. ಸಾಮಾನ್ಯವಾಗಿ ಶಾಸನಗಳಲ್ಲಿ ಸತ್ಯದ ಜೊತೆಗೆ ಹೊಗಳಿಕೆಯೂ ಸೇರಿರುತ್ತವೆ. ಹೊಗಳಿಕೆ ಯಾವುದು, ನಿಜವಾದ ಸಾಧನೆ ಯಾವುದು ಎಂಬುದನ್ನು ಶಾಸನಗಳ ಪರಿಚಯವಿರುವ ಇತಿಹಾಸಕಾರ ಗುರುತಿಸಬಲ್ಲ. ಈ ವಿಷಯದಲ್ಲಿ ಅವನು ಸಾಕಷ್ಟು ಜಾಗರೂಕನಾಗಿರಬೇಕು.

ಕರ್ನಾಟಕದ ಆಡಳಿತವನ್ನು ತಿಳಿಯುವಲ್ಲಿ ಶಾಸನಗಳೇ ಮುಖ್ಯ ಆಧಾರಗಳು. ಮಂತ್ರಿಗಳು, ವಿವಿಧ ಶಾಖೆಗಳು, ಅವುಗಳ ಅಧಿಕಾರಿಗಳು, ಅವರ ಕರ್ತವ್ಯಗಳು, ಸೈನ್ಯದ ಆಡಳಿತ, ರಾಜ್ಯದ ಉತ್ಪತ್ತಿ, ತೆರಿಗೆಗಳು ಮುಂತಾದವುಗಳು ಶಾಸನಗಳಲ್ಲಿ ವಿಶೇಷವಾಗಿ ಉಲ್ಲೇಖಿತವಾಗಿರುತ್ತವೆ. ಅದರಲ್ಲಿಯೂ ರಾಜ್ಯದ ಆರ್ಥಿಕ ಪರಿಸ್ಥಿತಿ ಮತ್ತು ಸರಕಾರಕ್ಕೆ ಕೊಡಬೇಕಾದ ತೆರಿಗೆಗಳ ವಿಷಯದಲ್ಲಿ ಶಾಸನಗಳು ಹೆಚ್ಚಿನ

ಮಾಹಿತಿಗಳು ಅಲ್ಲಲ್ಲಿ ದೊರಕುತ್ತವೆ. ಇತಿಹಾಸಕಾರನು ಇವನ್ನು ಸಂಗ್ರಹಿಸಿದರೆ ಸಾಮಾಜಿಕ ಇತಿಹಾಸ ರಚನೆಗೆ ಅನುಕೂಲವಾಗುತ್ತದೆ.

ಧಾರ್ಮಿಕ ಇತಿಹಾಸಕ್ಕೆ ಶಾಸನಗಳಿಂದ ವಿಶೇಷ ಮಾಹಿತಿ ದೊರಕುತ್ತದೆ ಎಂಬುದನ್ನು ಆಗಲೇ ವಿವರಿಸಿದ್ದೇವೆ. ಧರ್ಮವೇ ಶಾಸನಗಳಿಗೆ ಮೂಲವಾದುದರಿಂದ, ಮತೀಯ ಮತ್ತು ಧಾರ್ಮಿಕ ವಿಷಯಗಳು ಪ್ರತಿ ಶಾಸನದಲ್ಲಿಯೂ ದೊರೆಯುತ್ತವೆ. ಬೌದ್ಧ, ಜೈನ, ಶೈವ, ವೈಷ್ಣವ, ಕಾಪಾಲಿಕ ಮುಂತಾದ ಎಲ್ಲ ಧರ್ಮಗಳ ಇತಿಹಾಸವನ್ನೂ ಶಾಸನಗಳಿಂದ ಸುಲಭವಾಗಿ ರಚಿಸಬಹುದು.

ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಭಾಷಾ ಚರಿತ್ರೆಯನ್ನು ತಿಳಿಯಲು ಸಾಹಿತ್ಯಕ ಗ್ರಂಥಗಳು ಮುಖ್ಯವಾದರೂ, ಅದರಲ್ಲಿ ಶಾಸನಗಳಿಗೆ ವಿಶೇಷ ಮಹತ್ವವಿದೆ. ಅನೇಕ ಸಾಹಿತ್ಯ ಗ್ರಂಥಗಳು ನಮಗೆ ಇನ್ನೂ ದೊರಕಿಲ್ಲ. ಓಲೆಗರಿಯ ಮೇಲಿದ್ದ ಅನೇಕ ಗ್ರಂಥಗಳು ನಾಶವಾಗಿ ಹೋಗಿ ಅವುಗಳ ಪರಿಚಯವೇ ನಮಗೆ ಇಲ್ಲವಾಗಿದೆ. ಆದರೆ ಶಾಸನಗಳು ಕಲ್ಲು ಅಥವಾ ತಾಮ್ರದಂತಹ ಸುಲಭವಾಗಿ ನಾಶವಾಗದ ವಸ್ತುಗಳ ಮೇಲಿರುವುದರಿಂದ ಆಯಾ ಕಾಲದ ಕನ್ನಡ ಭಾಷೆಯ ಲಕ್ಷಣಗಳನ್ನು ತಿಳಿಸುವುದರಲ್ಲಿ ಸಹಾಯಕವಾಗಿವೆ. ಆಗಲೇ ಗಮನಿಸಿರುವಂತೆ ಕ್ರಿ. ಶ. ಐದನೆಯ ಶತಮಾನದ ಕನ್ನಡ ಭಾಷೆಯನ್ನು ತಿಳಿಯಲು ಹಲ್ಮಿಡಿ ಶಾಸನವೇ ಆಧಾರ. ನೃಪತುಂಗನಿಂದ ರಚಿತವಾದ ಕವಿರಾಜಮಾರ್ಗವೇ ನಮಗೆ ಇದುವರೆಗೆ ದೊರಕಿರುವ ಮೊದಲನೆಯ ಕನ್ನಡ ಗ್ರಂಥ. ಅದಕ್ಕೆ ಮುಂಚಿನ ಕನ್ನಡ ಭಾಷಾ ಬೆಳವಣಿಗೆಯನ್ನು ತಿಳಿಯಲು ನಾವು ಶಾಸನಗಳನ್ನೇ ಅವಲಂಬಿಸಬೇಕು. ಆದುದರಿಂದ

ಭಾಷಾಶಾಸ್ತ್ರದ ದೃಷ್ಟಿಯಿಂದ ಶಾಸನಗಳು ಭಾಷಾಶಾಸ್ತ್ರಜ್ಞನಿಗೆ ಬಹುಮುಖ್ಯ ಮಾಹಿತಿಗಳನ್ನು ಒದಗಿಸುತ್ತವೆ.

ಅಷ್ಟೇ ಅಲ್ಲದೆ, ಅನೇಕ ಶಾಸನಗಳು ಉತ್ತಮವಾಗಿರುವ ಕಾವ್ಯಗಳೇ ಆಗಿವೆ. ಅಲಂಕಾರ ಮುಂತಾದವುಗಳಿಂದ ಕೂಡಿದ ಈ ಸಣ್ಣ ಕಾವ್ಯಗಳ ಕವಿಗಳನ್ನು ಪರಿಚಯ ಮಾಡಿಕೊಡುವುದು ಈ ಶಾಸನಗಳು ಮಾತ್ರ. ಸಾಹಿತ್ಯ ಗ್ರಂಥಗಳಲ್ಲಿ ಕಾಣಬರದೇ ಇರುವ ನೂರಾರು ಕವಿಗಳ ಹೆಸರುಗಳನ್ನು ಶಾಸನಗಳು ಒದಗಿಸುತ್ತವೆ. ಆದುದರಿಂದ ಸಾಹಿತ್ಯಚರಿತ್ರೆಯಲ್ಲಿಯೂ ಶಾಸನಗಳ ಪಾತ್ರ ಮುಖ್ಯವಾದುದು. ಈ ರೀತಿ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಶಾಸನವು ಮಹತ್ತರವಾದ ಕೊಡುಗೆಯನ್ನು ನೀಡುತ್ತಲಿದೆ.

## ಸಂಶೋಧನೆ

ಶಾಸನಶಾಸ್ತ್ರವು ಇತರ ಶಾಸ್ತ್ರಗಳಂತೆ ಕ್ಲಿಷ್ಟವಾದ ಆದರೆ ಆಸಕ್ತಿಯುತವಾದ ಶಾಸ್ತ್ರ. ಶಾಸನ ವಿಜ್ಞಾನಿಯು ಮೊದಲು ಲಿಪಿ ವಿಜ್ಞಾನವನ್ನು ಅಭ್ಯಾಸಮಾಡಿ ಶಾಸನಗಳನ್ನು ಓದುತ್ತಾನೆ. ಅನಂತರ ಶಾಸನಗಳಲ್ಲಿರುವ ಮಹತ್ವವನ್ನು ಗುರುತಿಸಿ ಚರಿತ್ರಕಾರನಿಗೆ ಒದಗಿಸುತ್ತಾನೆ. ಶಿಲಾಶಾಸನಗಳನ್ನು ಅಧ್ಯಯನ ಮಾಡಲು ಶಾಸನ ವಿಜ್ಞಾನಿಯು ಮೊದಲು ಶಾಸನದ ಪ್ರತಿಯನ್ನು ತಯಾರಿಸುತ್ತಾನೆ. ಈ ಪ್ರತಿಗಳನ್ನು ತಯಾರಿಸುವುದೂ ಒಂದು ರೀತಿಯ ಕಲೆ. ಶಿಲಾಶಾಸನವನ್ನು ಚೆನ್ನಾಗಿ ತೊಳೆದು ಶುದ್ಧ ಮಾಡಬೇಕು. ಅನಂತರ ಆ ಕಲ್ಲಿನ ಮೇಲೆ ಅಕ್ಷರವಿರುವ ಭಾಗದ ಮೇಲೆ ತೆಳುವಾದ ಕಾಗದವನ್ನು ಹರಡಬೇಕು. ನೀರಿನಿಂದ ತೇವ

ಗೊಂಡ ಈ ಕಾಗದವನ್ನು ಇದಕ್ಕಾಗಿಯೇ ತಯಾರಿಸಿದ ಬ್ರಷ್‌ನಿಂದ ಮೆಲ್ಲಗೆ ಬಡಿಯಬೇಕು. ಆಗ ಅಕ್ಷರವಿರುವ ಸಂದಿಯಲ್ಲಿ ಕಾಗದವು ಹಿಂದಕ್ಕೆ ಹೋಗುತ್ತದೆ. ಅನಂತರ ಕಪ್ಪು ಪುಡಿಯನ್ನು ಈ ಕಾಗದದ ಮೇಲೆ ಸವರಬೇಕು. ಆಗ ಅಕ್ಷರದ ಭಾಗವು ಹಾಗೆಯೇ ಉಳಿದಿದ್ದು ಮಿಕ್ಕ ಭಾಗವು ಕಪ್ಪಗಾಗುತ್ತದೆ. ಇದರಿಂದ ಅಕ್ಷರಗಳು ಸ್ಫುಟವಾಗಿ ಕಾಣುತ್ತವೆ. ಈ ಪ್ರತಿಯನ್ನು ನಿಧಾನವಾಗಿ ಅಧ್ಯಯನ ಮಾಡಬೇಕು. ನಿಜವಾಗಿಯೂ ಇದು ಕಷ್ಟಸಾಧ್ಯವಾದ ಕೆಲಸ.

ಕರ್ನಾಟಕದ ಶಾಸನಗಳನ್ನು ಅಧ್ಯಯನ ಮಾಡುವಲ್ಲಿ ಭಾರತ ಸರ್ಕಾರದ ಪ್ರಾಚೀನ ಶಾಸನ ಇಲಾಖೆಯು ವಿಶೇಷವಾಗಿ ಕೆಲಸ ಮಾಡುತ್ತಿದೆ. ಮೈಸೂರಿನಲ್ಲಿರುವ ಈ ಸಂಸ್ಥೆಯು ಭಾರತದ ಇತರ ಪ್ರಾಂತ್ಯಗಳ ಜೊತೆಗೆ ಕರ್ನಾಟಕದಲ್ಲಿಯೂ ಶಾಸನಗಳ ಸಂಗ್ರಹಣ ಕಾರ್ಯ ನಡೆಸುತ್ತಿದೆ. ದಕ್ಷಿಣ ಭಾರತದ ಶಾಸನಗಳು, ವಾರ್ಷಿಕ ವರದಿಗಳು ಮತ್ತು ಎಪಿಗ್ರಾಫಿಯ ಇಂಡಿಕ ಗ್ರಂಥಗಳಲ್ಲಿ ಕರ್ನಾಟಕದ ಶಾಸನಗಳನ್ನು ಪ್ರಕಟಿಸಲಾಗುತ್ತಿದೆ.

ಮೈಸೂರು ಸರ್ಕಾರದ ಪುರಾತತ್ತ್ವ ಇಲಾಖೆಯು ಎಪಿಗ್ರಾಫಿಯ ಕರ್ನಾಟಿಕ ಎಂಬ ಹೊತ್ತಗೆಗಳಲ್ಲಿ ಕರ್ನಾಟಕದ ಶಾಸನಗಳನ್ನು ಪ್ರಕಟಿಸುತ್ತಿದೆ. ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ಸ್ನಾತಕೋತ್ತರ ಮಟ್ಟದಲ್ಲಿ ಶಾಸನಶಾಸ್ತ್ರವನ್ನು ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಎಪಿಗ್ರಾಫಿಯ ಕರ್ನಾಟಿಕದ ಮೊದಲ ಹನ್ನೆರಡು ಸಂಪುಟಗಳನ್ನು ಪರಿಷ್ಕರಿಸಿ ಪುನರ್ಮುದ್ರಿಸುವ ಕಾರ್ಯವನ್ನು ಮಾಡುತ್ತಲಿದೆ. ಇಷ್ಟಾದರೂ ಕೂಡ ಶಾಸನ

ಶಾಸ್ತ್ರದಲ್ಲಿ ಆಗಬೇಕಾದಷ್ಟು ಕೆಲಸ ಆಗುತ್ತಿಲ್ಲವೆಂದು ಹೇಳ ಬೇಕು.

## ಅಮೂಲ್ಯ ಆಸ್ತಿ

ಕರ್ನಾಟಕದ ಶಾಸನಗಳು ನಮ್ಮ ಅಮೂಲ್ಯ ಆಸ್ತಿ. ಅವು ನಮ್ಮ ಸಂಸ್ಕೃತಿಯ ಕಣಜ ಅಥವಾ ಗಣಿ. ಇವುಗಳು ನಾಶ ವಾದರೆ ನಮ್ಮ ಸಂಸ್ಕೃತಿಯ ಅಧ್ಯಯನ ಸ್ಥಗಿತವಾದಂತೆಯೇ. ಆದುದರಿಂದ ಪ್ರತಿಯೊಬ್ಬ ಕನ್ನಡಿಗನೂ ಈ ಅಮೂಲ್ಯ ಆಸ್ತಿ ಯನ್ನು ಕಾಪಾಡಿಕೊಂಡು ಬರಲು ಪಣ ತೊಡಬೇಕು. ವಿದ್ಯಾರ್ಥಿ ಗಳು ಅವುಗಳ ಅಧ್ಯಯನದಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳಬೇಕು. ಹಾಗಾದರೆ ಮಾತ್ರ ಶಾಸನಗಳನ್ನು ಓದಬಲ್ಲ ಯುವಕರ ಪೀಳಿಗೆಯು ತಯಾರಾಗುತ್ತದೆ. ಇಲ್ಲದೇ ಹೋದಲ್ಲಿ ಇವುಗಳನ್ನು ಓದಲಾಗದೆ ಜೇಮ್ಸ್ ಪ್ರಿನ್‌ಸೆಪ್‌ನ ಕಾಲದಲ್ಲಿ ಇದ್ದಂತೆ ನಮ್ಮ ಪೂರ್ವಿಕರ ಬರಹವನ್ನು ನಾವೇ ಓದಲಾರದೆ ಹೋಗಿ ವಿದೇಶೀ ಯರ ಅಪಹಾಸ್ಯಕ್ಕೆ ಗುರಿಯಾಗುತ್ತೇವೆ.

ನಮ್ಮ ಹಳ್ಳಿಗಳಲ್ಲಿ ಶಾಸನದ ಪರಿಚಯವಿರುವ ಜನ ಬಹು ಕಡಿಮೆ. ಅವರಿಗೆ ಅವುಗಳ ಬೆಲೆ ತಿಳಿದಿಲ್ಲ. ಆದುದರಿಂದ ಹಳ್ಳಿಗರು ತಮ್ಮ ಮೌಢ್ಯದಿಂದ ಎಷ್ಟೋ ಶಾಸನದ ಕಲ್ಲುಗಳನ್ನು ಒಡೆದು ಮನೆ ಕಟ್ಟುವುದಕ್ಕಾಗಿ ಬಟ್ಟೆ ಒಗೆಯುವುದಕ್ಕಾಗಿ, ಇನ್ನೂ ಈ ರೀತಿಯ ಇತರ ಕಾರ್ಯಗಳಿಗಾಗಿ ಬಳಸುತ್ತಲಿದ್ದಾರೆ. ಒಂದು ಸಾರಿ ಒಂದು ಶಾಸನ ಹಾಳಾದರೆ ಅದನ್ನು ಯಾರೂ ಪುನರು ಜ್ಜೀವನ ಗೊಳಿಸಲಾರರು. ಆದುದರಿಂದ ವಿದ್ಯಾರ್ಥಿಗಳು

ತಾವು ಹಳ್ಳಿಗಳಿಗೆ ಹಿಂದಿರುಗಿದಾಗ, ಹಳ್ಳಿಗರಿಗೆ ಶಾಸನದ ಮಹತ್ವವನ್ನು ವಿವರಿಸಿ ಹೇಳಬೇಕು. ನಾಶವಾಗುವ ಇಲ್ಲವೇ ಹಾಳಾಗುವ ಪರಿಸ್ಥಿತಿಯಲ್ಲಿ ಶಾಸನ ಬಿದ್ದಿದ್ದರೆ, ಅದನ್ನು ಸುರಕ್ಷಿತವಾದ ಸ್ಥಳಕ್ಕೆ ಸಾಗಿಸಬೇಕು. ಇದು ಕರ್ನಾಟಕಕ್ಕೆ ನಾವು ಸಲ್ಲಿಸಬಹುದಾದ ಕಾಣಿಕೆ. ಇದರಿಂದ ನಮ್ಮ ಇತಿಹಾಸ ಮತ್ತು ಸಂಸ್ಕೃತಿ ಶ್ರೀಮಂತವಾಗುತ್ತದೆ.



